ಸಶಕ್ತ ನಾರಿ ಸಶಕ್ತ ಸಮಾಜ

ಮಹಿಳಾ ಸಶಕ್ತತಾ ವರ್ಷ 2001
women's Empowerment year 2001

# ಮಹಿಳಾ ಅಭಿವೃದ್ಧಿ ಕ್ರಿಯಾ ಯೋಜನಾ ಸಮಿತಿ



## ಮಧ್ಯಂತರ ವರದಿ

## INTERIM REPORT

8TH MARCH 2001

# TASK FORCE ON WOMEN EMPOWERMENT

ಕರ್ನಾಟಕ ಸರ್ಕಾರ

# ಮಹಿಳಾ ಅಭಿವೃದ್ಧಿ ಕ್ರಿಯಾ ಯೋಜನಾ ಸಮಿತಿ

# (Task Force on Women Empowerment)

# ಮಧ್ಯಂತರ ವರದಿ

## ಮಾರ್ಚ್ 8, 2001

ನಂ.429, 4ನೇ ಮಹಡಿ, ಬಹುಮಹಡಿ ಕಟ್ಟಡ,
ಡಾ. ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು-560 001.
ದೂರವಾಣಿ: (080) 2268212

ಭಾರತದ ಆರ್ಥಿಕ, ನೈತಿಕ ಉನ್ನತಿ
ನಿಮ್ಮನ್ನೇ (ಮಹಿಳೆಯರನ್ನೇ) ಮುಖ್ಯವಾಗಿ ಅವಲಂಬಿಸಿದೆ.
ಭಾರತದ ಭಾವಿ ಸಂತಾನವನ್ನು ಪೋಷಿಸುವವರು ನೀವು.
ಆದ್ದರಿಂದ ಭಾರತದ ಭವಿಷ್ಯವು ನಿಮ್ಮ ಮಡಿಲಲ್ಲಿದೆ.
ಭಾರತದ ಮಕ್ಕಳನ್ನು ಸರಳ ಜೀವಿಗಳು, ದೈವಭೀರುಗಳು, ಧೈರ್ಯಶಾಲಿಗಳು
ಆದ ಸ್ತ್ರೀ ಪುರುಷರನ್ನಾಗಿ ಮಾಡುವ ಭಾರ ನಿಮ್ಮದಾಗಿದೆ.

- ಗಾಂಧೀಜಿ

ಹುಡುಗನೆಂದರೆ ಹುಡುಗನೆ. ಆದರೆ
ಹುಡುಗಿಯೆಂದರೆ ಒಬ್ಬ ಮಹಿಳೆ

- ಅನಾಮಿಕ





ಕರ್ನಾಟಕ ಸರ್ಕಾರ

# ಮಹಿಳಾ ಅಭಿವೃದ್ಧಿ ಕ್ರಿಯಾ ಯೋಜನಾ ಸಮಿತಿ

# (Task Force on Women Empowerment)

ಅಧ್ಯಕ್ಷರು

**ಶ್ರೀಮತಿ. ಗುರಮ್ಮ ಸಿದ್ದಾರೆಡ್ಡಿ**

ಸದಸ್ಯರು

**ಶ್ರೀಮತಿ ಲಕ್ಷ್ಮಿಬಾಯಿ ಗುರಪ್ಪ, ಗೌರ್ ಶ್ರೀಮತಿ ಶೌಕತ್ ಖುರೇಶಿ,**
**ಶ್ರೀಮತಿ ವಾಸಂತಿ ಶಿವಣ್ಣ, ಶ್ರೀಮತಿ ಎಸ್.ಜಿ. ಸುಶೀಲಮ್ಮ**
**ಶ್ರೀಮತಿ ಶಾಂತದೇವಿ ಕಣವಿ**

ಸಲಹೆಗಾರರು

**ಶ್ರೀಮತಿ ಪದ್ಮಾ ಸೇಟ್**

ಅಧಿಕಾರಿ ಸದಸ್ಯರು

**ಶ್ರೀಮತಿ ಮೀರಾ ಸಕ್ಸೇನ**

ಸದಸ್ಯ ಕಾರ್ಯದರ್ಶಿ

**ಶ್ರೀಮತಿ ವಿದ್ಯಾವತಿ**

ಸಂಪರ್ಕಾಧಿಕಾರಿ

**ಶ್ರೀ ಪಾಲಾಕ್ಷಪ್ಪ ಪೂಜಾರ್**

# ಮಹಿಳೆಯರ ಕಲ್ಯಾಣ: ತಜ್ಞರ ಕಾರ್ಯ ತಂಡ ರಚನೆ - ಕೃಷ್ಣ

ಬೆಂಗಳೂರು ಮಾರ್ಚ್ 8 - ರಾಜ್ಯದಲ್ಲಿ ಮಹಿಳೆಯರ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾದ ಕ್ರಿಯಾ ಯೋಜನೆ ರೂಪಿಸಲು ಐವರು ಮಹಿಳಾ ತಜ್ಞರ ಕಾರ್ಯತಂಡವೊಂದನ್ನು ರಚಿಸಲಾಗಿದೆ ಎಂದು ಮುಖ್ಯ ಮಂತ್ರಿ ಎಸ್.ಎಂ. ಕೃಷ್ಣ ಅವರು ಇಂದು ಇಲ್ಲಿ ಪ್ರಕಟಿಸಿದರು.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ಸಂಯುಕ್ತ ಆಶ್ರಯದಲ್ಲಿ ನಗರದ ಮಲ್ಲೇಶ್ವರಂ ಆಟದ ಮೈದಾನದಲ್ಲಿ ನಡೆದ ವಿಶ್ವ ಮಹಿಳಾ ದಿನಾಚರಣೆಯಲ್ಲಿ ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿ ಪ್ರದಾನ ಮಾಡಿ ಮಾತನಾಡಿದ ಅವರು, ಈ ಕಾರ್ಯತಂಡ ಇಂದಿನಿಂದಲೇ ಕಾರ್ಯಾರಂಭ ಮಾಡಿದೆ ಎಂದು ತಿಳಿಸಿದರು.

ಸದಸ್ಯೆಯರು ಗುರಮ್ಮ ಸಿದ್ದಾರೆಡ್ಡಿ ಅವರ ನೇತೃತ್ವದ ಕಾರ್ಯತಂಡದಲ್ಲಿ ಸಾಮಾಜಿಕ ಕಾರ್ಯಕರ್ತೆಯರಾದ ಶೌಕತ್ ಖುರೇಷಿ, ವಾಸಂತಿ ಶಿವಣ್ಣ ಸಾಹಿತಿ ಶಾಂತಾದೇವಿ ಕಣವಿ ಹಾಗೂ ಸುಮಂಗಲಿ ಸೇವಾಶ್ರಮದ ಸುಶೀಲಮ್ಮ ಅವರು ಸದಸ್ಯರಾಗಿದ್ದಾರೆ. ರಾಷ್ಟ್ರೀಯ ಮಹಿಳಾ ಆಯೋಗದ ಮಾಜಿ ಸದಸ್ಯೆ ಪದ್ಮಾಸೇಠ್ ಅವರು ಕಾರ್ಯ ತಂಡಕ್ಕೆ ಸಲಹೆಗಾರರಾಗಿ ಕೆಲಸ ಮಾಡಲಿದ್ದಾರೆ ಎಂದು ಮುಖ್ಯ ಮಂತ್ರಿ ಅವರು ಹೇಳಿದರು.

ಮಹಿಳೆಯರ ಕ್ಷೇಮಾಭಿವೃದ್ಧಿಗೆ ಸರ್ಕಾರ ಬದ್ಧವಾಗಿದೆ ಎಂದು ಪುನರುಚ್ಚರಿಸಿದ ಅವರು, ಪುರುಷ ಪ್ರಧಾನ ಸಮಾಜದಲ್ಲಿ ಶೋಷಣೆಗೆ ಒಳಗಾಗಿರುವ ಮಹಿಳೆಯರ ಪ್ರಗತಿಗೆ ಹತ್ತು ಹಲವು ಯೋಜನೆಗಳು ಗಣನೀಯ ಪ್ರಮಾಣದಲ್ಲಿ ಪ್ರಗತಿ ಸಾಧಿಸಿವೆಯಾದರೂ ಬದಲಾವಣೆ ವೇಗ, ನಿರೀಕ್ಷಿತ ಮಟ್ಟದಲ್ಲಿ ಇಲ್ಲ ಎಂದು ವಿಷಾದಿಸಿದರು.

ಸಮಾಜದಲ್ಲಿ ಶೇ.27ರಷ್ಟು ದುಡಿಯುವ ಮಹಿಳೆಯರಿದ್ದಾರೆ. ಶೇ.87 ರಷ್ಟು ಅಸಂಘಟಿತ ವಲಯದಲ್ಲಿದ್ದು, ಕೃಷಿ ಕ್ಷೇತ್ರದಲ್ಲಿ ಮಹಿಳೆಯರ ಕೊಡುಗೆ ಗಣನೀಯ ರಾಜ್ಯವೊಂದರಲ್ಲೇ ಸುಮಾರು 22 ಲಕ್ಷ ಮಂದಿ ರೇಷ್ಮೆ ಕೃಷಿಯಲ್ಲಿದ್ದರೆ ಅವರಲ್ಲಿ ಶೇ.65ರಷ್ಟು ಮಂದಿ ಮಹಿಳೆಯರಿದ್ದಾರೆ. ಮಹಿಳೆಯರ ಸಾಕ್ಷರತಾ ಪ್ರಮಾಣ ಪುರುಷರಿಗಿಂತ ಕಡಿಮೆ ಇರುವುದ ರಿಂದ ಸಮಾಜದ ಪ್ರಗತಿ ನಿರೀಕ್ಷಿತ ಪ್ರಮಾಣ ದಲ್ಲಿ ಆಗಿಲ್ಲ ಎಂದರು.

ರಾಜಕೀಯ ಅಧಿಕಾರ ಸಂವಿಧಾನದ 73ನೇ ತಿದ್ದುಪಡಿಯಿಂದಾಗಿ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಶೇ.33ರಷ್ಟು ಸ್ಥಾನ ಮೀಸಲಿಡಲಾಗಿದೆ. ಸ್ಥಳೀಯ ಸರ್ಕಾರಗಳಲ್ಲಿ ಸದಸ್ಯರು, ಅಧ್ಯಕ್ಷ ಹಾಗೂ ಉಪಾಧ್ಯಕ್ಷರು ಸೇರಿದಂತೆ ಇವರ ಮೀಸಲಾತಿ ಪ್ರಮಾಣ ಶೇ.40ರಷ್ಟು ಇದೆ. ಮಹಿಳೆಯರಿಗೆ ನೀಡಲಾಗಿರುವ ಇಷ್ಟೊಂದು ಪ್ರಮಾಣದ ರಾಜಕೀಯ ಅಧಿಕಾರ ಇನ್ಯಾವುದೇ ದೇಶದಲ್ಲೂ ಇಲ್ಲ ಎಂದು ಕೃಷ್ಣ ಹೇಳಿದರು.

1998-99ನೇ ಸಾಲಿನ ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿಯನ್ನು' ಚಿಕ್ಕಮಗಳೂರಿನ ಗೌರಮ್ಮ ಅಯ್ಯಮ್ಮ ಹಾಗೂ ಬೆಳಗಾವಿಯ ಶಹಾಪುರದ ಮಹಿಳಾ ಕಲ್ಯಾಣ ಸಂಸ್ಥೆಗೆ ಮುಖ್ಯಮಂತ್ರಿ ಪ್ರದಾನ ಮಾಡಿದರು. ಗೌರಮ್ಮ ಅಯ್ಯಮ್ಮ ಮತ್ತು ಕಲ್ಯಾಣ ಸಂಸ್ಥೆ ಅಧ್ಯಕ್ಷೆ ವೈಜಯಂತಿ ಚೌಗುಲಾ ಅವರಿಗೆ ಶಾಲು ಹೊದಿಸಿ ಪ್ರಶಸ್ತಿ ನೀಡಿದರು.

ರಾಜ್ಯಪಾಲರ ಕರೆ: ಕಾರ್ಯಕ್ರಮ ಉದ್ಘಾಟಿಸಿದ ರಾಜ್ಯಪಾಲರಾದ ವಿ.ಎಸ್. ರಮಾದೇವಿ ಅವರು, ಮಹಿಳೆಯರ ಕಲ್ಯಾಣಕ್ಕೆ ಸಂಬಂಧಪಟ್ಟ ಯೋಜನೆಗಳ ಅನುಷ್ಠಾನದಲ್ಲಿ ಸ್ವಯಂ ಸೇವಾ ಸಂಸ್ಥೆಗಳನ್ನು ತೊಡಗಿಸಿ ಕೊಳ್ಳಬೇಕು ಎಂದು ಕರೆ ನೀಡಿದರು.

ವಿಶೇಷವಾಗಿ ಸ್ವಯಂ ಸೇವಾ ಸಂಸ್ಥೆಗಳು ಗ್ರಾಮೀಣ ಮತ್ತು ಕೊಳಗೇರಿ ಪ್ರದೇಶಗಳಲ್ಲಿ ಸರ್ಕಾರದ ಯೋಜನೆಗಳನ್ನು ಜಾರಿಗೆ ತರಲು ಶ್ರಮಿಸಬೇಕು. ಎಷ್ಟೋ ಯೋಜನೆಗಳು ಮಹಿಳೆಯರಿಗೆ ತಿಳಿದೇ ಇಲ್ಲ. ಈ ಬಗ್ಗೆ ಅವರಲ್ಲಿ ತಿಳುವಳಿಕೆ ಮೂಡಿಸಬೇಕು. ಪುರುಷ ಹಾಗೂ ಮಹಿಳೆ ಇಬ್ಬರೂ ಒಗ್ಗಟ್ಟಾಗಿ ದುಡಿದಾಗ ಮಾತ್ರ ಸಮಾಜದ ಉದ್ಧಾರವಾಗುತ್ತದೆ ಎಂದರು.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ದ್ವೈಮಾಸಿಕ ಪತ್ರಿಕೆ ಶಿಶು ಕಲ್ಯಾಣವನ್ನು ಬಿಡುಗಡೆ ಮಾಡಿ ಮಾತನಾಡಿದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವೆ ರಾಣಿ ಸತೀಶ್ ಅವರು, ಮಹಿಳಾ ಆಯೋಗವು ಮಹಿಳಾ ಅಭಿವೃದ್ಧಿ ಘಟಕ ಗಳನ್ನು ರಚಿಸಿ ಮಹಿಳೆಯರ ಹಕ್ಕುಗಳ ಬಗ್ಗೆ ಸಂಘ ಸಂಸ್ಥೆಗಳ ಮೂಲಕ ಮನವರಿಕೆ ಮಾಡಿಕೊಡಲು ಪ್ರಯತ್ನಿಸಬೇಕು ಎಂದರು.

ಸ್ಫೂರ್ತಿ ಮೂಡಿಸಬೇಕು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವೆ ಮೋಟಮ್ಮ ಅವರು ಮಾತನಾಡಿ, ಮಹಿಳೆಯರು ಎದುರಿಸು ತ್ತಿರುವ ಸಮಸ್ಯೆಗಳಿಗೆ ಸಾವು ಪರಿಹಾರವಲ್ಲ. ನೊಂದ ಮಹಿಳೆಗೆ ನೈತಿಕ ಬೆಂಬಲ ಹಾಗೂ ನೆರವು ನೀಡುವ ಮೂಲಕ ಅವರಲ್ಲಿ ಆತ್ಮವಿಶ್ವಾಸ ಮತ್ತು ಸ್ಥೈರ್ಯ ಮೂಡಿಸಬೇಕು ಎಂದು ಕರೆ ನೀಡಿದರು.

ರಾಜ್ಯ ಸರ್ಕಾರವು ಮಹಿಳೆಯರ ಅಭಿವೃದ್ಧಿಗೆ ಹಮ್ಮಿಕೊಂಡಿರುವ ವಿವಿಧ ಯೋಜನೆಗಳನ್ನು ಪ್ರಸ್ತಾಪಿಸಿದ ಅವರು ಮುಂಬರುವ ಬಜೆಟ್‌ನಲ್ಲಿ ಈ ಯೋಜನೆ ಗಳಿಗೆ ಹೆಚ್ಚಿನ ಅಧಿಕ ನೆರವು ನೀಡುವುದಾಗಿ ಮುಖ್ಯಮಂತ್ರಿ ಅವರು ಭರವಸೆ ನೀಡಿದ್ದಾರೆ ಎಂದು ಹೇಳಿದರು.

ಬೆಂಗಳೂರು ಮೇಯರ್ ಎಂ. ರಾಮಚಂದ್ರಪ್ಪ ಮತ್ತು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ನಿರ್ದೇಶಕ ಎಸ್.ಸಿ. ಮುನಿಯಪ್ಪ ಅವರು ಉಪಸ್ಥಿತರಿದ್ದರು. ಇಲಾಖೆ ಕಾರ್ಯದರ್ಶಿ ಮೀರಾ ಸಿ. ಸಕ್ಸೇನಾ ಸ್ವಾಗತಿಸಿದರು. ಮಹಿಳಾ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕಿ ವಿ. ರಶ್ಮಿ ಅವರು ವಂದಿಸಿದರು.

ಮಹಿಳಾ ದಿನಾಚರಣೆ ಅಂಗವಾಗಿ ಇಂದಿನಿಂದ ಇದೇ 11ರವರೆಗೆ ವಸ್ತುಪ್ರದರ್ಶನ ಏರ್ಪಡಿಸಲಾಗಿದೆ. ಪ್ರತಿ ದಿನ ಸಂಜೆ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯಲಿವೆ.

# ನಿವೇದನೆ

## ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ರವರಿಗೆ,

ರಾಜ್ಯದ ಸರ್ವಾಂಗೀಣ ಅಭಿವೃದ್ಧಿಗೆ ನಿಮ್ಮ ಅಧಿಕಾರದ ಅವಧಿಯಲ್ಲಿ ಹಾಕಿಕೊಂಡಿರುವ ಹಲವಾರು ಯೋಜನೆಗಳು ಫಲಪ್ರದವಾಗುತ್ತಿದ್ದು, ರಾಜ್ಯವು ತೀವ್ರ ಗತಿಯಲ್ಲಿ ಅಭಿವೃದ್ಧಿ ಪಥದಲ್ಲಿ ಮುನ್ನಡೆಯುತ್ತಿದೆ. ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿಯಂತೂ ಜಗತ್ತೇ ನಿಬ್ಬೆರಗಾಗುವಂತಹ ಸಾಧನೆ ನಮ್ಮ ರಾಜ್ಯದ್ದು. ಇದಕ್ಕೆ ನಿಮ್ಮ ದೂರದೃಷ್ಟಿ, ದಕ್ಷ ಮತ್ತು ಸಮರ್ಥ ನಾಯಕತ್ವವೇ ಕಾರಣ. ನೀವು ಅಧಿಕಾರ ವಹಿಸಿಕೊಂಡ ತಕ್ಷಣ ವಿವಿಧ ಕ್ಷೇತ್ರಗಳ ಅಭಿವೃದ್ಧಿಗೆ ಕೈಗೊಳ್ಳಬೇಕಾಗಿರುವ ಕ್ರಮಗಳ ಕುರಿತು ಆಯಾ ಕ್ಷೇತ್ರದ ತಜ್ಞರನ್ನೊಳಗೊಂಡ ಸಮಿತಿಗಳನ್ನು ನೇಮಕ ಮಾಡಿ ಆ ಮೂಲಕ ರಾಜ್ಯದ ಸರ್ವಾಂಗೀಣ ಅಭಿವೃದ್ಧಿಗೆ ಮುಂದಾಗಿರುವುದು ಅಪಾರ ಜನರ ಮೆಚ್ಚುಗೆಗೆ ಪಾತ್ರವಾಗಿದೆ.

ಶಿಕ್ಷಣ, ಆರೋಗ್ಯ, ಕೃಷಿ, ಆಡಳಿತ, ಗಡಿ ಅಭಿವೃದ್ಧಿ, ಪತ್ರಿಕೋದ್ಯಮ ಹೀಗೆ ಹತ್ತು ಹಲವು ಕ್ಷೇತ್ರಗಳ ಅಭಿವೃದ್ಧಿಯ ಜೊತೆಗೆ ಪ್ರಸಕ್ತ ವರ್ಷ, ಮಹಿಳಾ ಸಶಕ್ತೀಕರಣ ವರ್ಷ ಆಚರಣೆಯ ಸಂದರ್ಭದಲ್ಲಿ ರಾಜ್ಯದ ಮಹಿಳೆಯರ ಸರ್ವತೋಮುಖ ಅಭಿವೃದ್ಧಿಗೆ ಹಮ್ಮಿಕೊಳ್ಳ ಬೇಕಾಗಿರುವ ಕಾರ್ಯಕ್ರಮಗಳ ಕುರಿತು ಅಧ್ಯಯನ ಮಾಡಿ ವರದಿ ಸಲ್ಲಿಸಲು ಮಹಿಳಾ ಅಭಿವೃದ್ಧಿ ಕ್ರಿಯಾ ಯೋಜನಾ ಸಮಿತಿ (Task Force on Women Empowerment) ಯನ್ನು ನೇಮಕ ಮಾಡಿದ್ದು ಅತ್ಯಂತ ಅಭಿನಂದನಾರ್ಹ ಕಾರ್ಯವಾಗಿದೆ. ಸ್ವಾತಂತ್ರ್ಯ ನಂತರದ ಐದು ದಶಕಗಳ ನಂತರ ಮಹಿಳೆಯರ ಸರ್ವತೋಮುಖ ಅಭಿವೃದ್ಧಿಗೋಸ್ಕರ ಇಂಥ ಒಂದು ಸಮಿತಿ ನೇಮಕ ಮಾಡಿರುವುದು ರಾಜ್ಯದಲ್ಲಿ ಇದು ಪ್ರಥಮ ಪ್ರಯತ್ನ.

ಈ ವಿಷಯವನ್ನು ಗಮನದಲ್ಲಿಟ್ಟುಕೊಂಡು ಮಹಿಳಾ ಅಭಿವೃದ್ಧಿ ಕ್ರಿಯಾಯೋಜನಾ ಸಮಿತಿಯು ಇಲ್ಲಿಯವರೆಗೆ ಒಟ್ಟು 16 ಸಭೆಗಳನ್ನು ನಡೆಸಿ ಮಹಿಳಾ ಅಭಿವೃದ್ಧಿಗೆ ಸಂಬಂಧಪಟ್ಟಂತೆ ಅನೇಕ ವಿಷಯಗಳನ್ನು ಅಭ್ಯಸಿಸಿತು. ಈ 16 ಸಭೆಗಳ ಪೈಕಿ ಐದು ಸಭೆಗಳಲ್ಲಿ ಪ್ರತ್ಯೇಕವಾಗಿ ಹಿರಿಯ ಮಹಿಳಾ ರಾಜಕಾರಣಿಗಳು, ಸಮಾಜ ಸೇವಾ ಕಾರ್ಯಕರ್ತೆಯರು, ಲೇಖಕಿಯರು ಹಾಗೂ ಮಹಿಳೆಯರ ವಿಷಯಕ್ಕೆ ಸ್ಪಂದಿಸಿ ಬರೆದ ಲೇಖಕರು, ಸಾಮಾಜಿಕ ಮತ್ತು ಆರ್ಥಿಕ ಬದಲಾವಣಾ ಸಂಸ್ಥೆಯ ತಜ್ಞರು, ಹಿರಿಯ ಮಹಿಳಾ ಅಧಿಕಾರಿಗಳನ್ನು ಆಹ್ವಾನಿಸಿ, ಅವರ ಅಭಿಪ್ರಾಯಗಳನ್ನು ಕ್ರೋಢಿಕರಿಸಲಾಯಿತು. ಇದಲ್ಲದೇ ಗುಲಬರ್ಗಾ ಮತ್ತು ಬೆಳಗಾವಿಯಲ್ಲಿ ಒಂದೊಂದು ದಿನದ ವಿಭಾಗೀಯ ಮಟ್ಟದ ಕಾರ್ಯಗಾರವನ್ನು ಹಾಗೂ ಬೆಂಗಳೂರಿನಲ್ಲಿ ರಾಜ್ಯಮಟ್ಟದ ಸ್ವಯಂ ಸೇವಾ ಸಂಸ್ಥೆಗಳ ಒಂದು ವಿಚಾರ ಸಂಕಿರಣವನ್ನು ನಡೆಸಿ, ವಿವಿಧ ವರ್ಗದ ಮಹಿಳೆಯರ ಅಭಿಪ್ರಾಯ, ಸಲಹೆ, ಸೂಚನೆಗಳನ್ನು ಸಂಗ್ರಹಿಸಲಾಯಿತು. ಈ ಎಲ್ಲಾ ಸಭೆ, ಕಾರ್ಯಾಗಾರ, ವಿವಿಧ ತಜ್ಞರ ಜೊತೆ ನಡೆಸಿದ ಚರ್ಚೆಗಳ ಆಧಾರದ ಮೇಲೆ ಮಧ್ಯಂತರ ವರದಿಯೊಂದನ್ನು ಸಿದ್ಧಪಡಿಸಿ ಮುಂದಿನ ಕ್ರಮಕ್ಕಾಗಿ ತಮಗೆ ಸಲ್ಲಿಸುತ್ತಿದ್ದೇನೆ. ಈ ಮಧ್ಯಂತರ ವರದಿಯ ಶಿಫಾರಸ್ಸುಗಳಲ್ಲಿ ಕೆಲವನ್ನು ತ್ವರಿತವಾಗಿ ಜಾರಿಗೊಳಿಸಬಹುದಾಗಿದ್ದು, ಇನ್ನು ಕೆಲವನ್ನು ದೀರ್ಘಾವಧಿ ಯೋಜನೆಗಳನ್ನಾಗಿ ರೂಪಿಸಿ ಜಾರಿಗೊಳಿಸಬಹುದಾಗಿದೆ. ಈ ಸಂಬಂಧ ತಾವು ಶೀಘ್ರ ಕ್ರಮ ಕೈಗೊಳ್ಳುತ್ತೀರಿ ಎಂದು ಆಶಿಸುತ್ತೇನೆ.

ವಂದನೆಗಳೊಂದಿಗೆ,

**ಗುರಮ್ಮ ಸಿದ್ದಾರೆಡ್ಡಿ**

**ಅಧ್ಯಕ್ಷರು**

**ಮಹಿಳಾ ಅಭಿವೃದ್ಧಿ ಕ್ರಿಯಾ ಯೋಜನಾ ಸಮಿತಿ**

ಮಹಿಳಾ ಕ್ರಿಯಾ ಯೋಜನಾ ಸಮಿತಿಯ
ಈ ವರದಿಯು ಮಹಿಳೆಯರ ಸಮಗ್ರ
ಅಭಿವೃದ್ಧಿಯ ಬಗ್ಗೆ ಗಂಭೀರ ಚಿಂತನೆ
ನಡೆಸಿ ಸ್ಪಂದಿಸಿದ ಕಿರು ಪ್ರಯತ್ನವಾಗಿದೆ.

# ಪರಿವಿಡಿ

* ಪ್ರಪಂಚದ ಅತೀ ಪೂಜ್ಯನೀಯ ವಸ್ತು ತಾಯಿ

**- ಲೋವೆಲ್**

* ಸ್ವರ್ಗದ ಕಾವ್ಯ ನಕ್ಷತ್ರವಾದರೆ ವಿಶ್ವದ ಕಾವ್ಯ ಮಹಿಳೆ

**- ಹಾಗ್ರೇವ್**

* ಸ್ತ್ರೀ ಗೃಹದೇವತೆ ಮಾತ್ರವಲ್ಲ ಜೀವಾಗ್ನಿ

**- ರವೀಂದ್ರನಾಥ ಟ್ಯಾಗೋರ್**

* ನೀರಿದ್ದರೆ ಊರು ಅಂದ, ನಾರಿಯಿದ್ದರೆ ಮನೆ ಚೆಂದ

**- ಜನಪದ ಸಾಹಿತ್ಯ**

* ಇರುವೆಯಷ್ಟು ಬಲ ಇರಲಿ, ಹೆಂಗಸಿನಷ್ಟು ಛಲವಿರಲಿ

**- ವೇದಾಂತ**

* ಪ್ರತಿಯೊಂದು ಮಹಾತ್ಯಾಗದ ಹಿಂದೆಯೂ ಒಬ್ಬೊಬ್ಬ ಸ್ತ್ರೀ ಇದ್ದಾಳೆ

**- ಮಾರ್ಕ್ಸ್**

* ತಾಯಿ ಬೆಳೆಸುವುದರ ಮೇಲೆಯೇ ಮಗುವಿನ ಭವಿಷ್ಯ ರೂಪುಗೊಳ್ಳುವುದು

**- ಅನಾಫೆಲ್ ಫ್ರಾನ್ಸ್**

* ಒಬ್ಬ ಹೆಣ್ಣಿನೊಡನೆ ನಡೆಸುವ ಬಾಳ್ವೆ ಹಲವು ನೀತಿ ಗ್ರಂಥಗಳ ಪಠನಕ್ಕೆ ಸಮ

**- ಕಣ್ಣದಾಸನ್**

* ತಾಳ್ಮೆ ಮತ್ತು ತ್ಯಾಗ ಇವುಗಳನ್ನು ದೇವರು ಹೆಣ್ಣಿಗೆ ಮಾತ್ರ ಬರೆದುಕೊಟ್ಟನೆಂದು ಕಾಣುತ್ತದೆ

**- ಪ್ರೊ. ವಿಂಡೊ.ವಿವಿ**

# ಪ್ರಸ್ತಾವನೆ

ಮಹಿಳೆಯರಿಗೆ ಉತ್ತಮ ಸ್ಥಾನ ಇರಬೇಕಾದ ಕಲ್ಪನೆ ಮತ್ತು ಮಾನಸಿಕ ಭಾವನೆ ಭಾರತದಲ್ಲಿ ಶತಮಾನಗಳಿಂದ ನಡೆದು ಬಂದಿದ್ದು, ಮಹಿಳೆ ದೇವರ ಸಮಾನವೆಂಬ ಕಲ್ಪನೆ ಪ್ರಬಲವಾಗಿದೆ. ಸ್ವಾತಂತ್ರ್ಯದ ನಂತರ ಭಾರತೀಯ ಸಂವಿಧಾನದಲ್ಲಿ ಸ್ತ್ರೀಯರ ಅಭಿವೃದ್ಧಿಗೆ ಪೂರಕವಾಗಿ ಸಂವಿಧಾನದಲ್ಲಿ ಅನೇಕ ತಿದ್ದುಪಡಿಗಳಾಗಿರುವುದು (ಅನುಬಂಧ-1) ನಿಧಾನವಾಗಿಯಾದರೂ ರಾಷ್ಟ್ರವು ಮಹಿಳಾ ಅಭಿವೃದ್ಧಿಗಾಗಿ ಸ್ಪಂದಿಸುತ್ತಿರುವುದಕ್ಕೆ ಸೂಚಕವಾಗಿದೆ.

ಕೇಂದ್ರ ಹಾಗೂ ಕರ್ನಾಟಕ ರಾಜ್ಯ ಸರ್ಕಾರಗಳು ಮಹಿಳಾ ಅಭಿವೃದ್ಧಿಗಾಗಿ ಪ್ರತ್ಯೇಕ ಇಲಾಖೆಗಳನ್ನು ಪ್ರಾರಂಭಿಸಿ ಈ ದಿಕ್ಕಿನಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿವೆ. ವಿಶ್ವ ಸಂಸ್ಥೆಯ ಸಲಹೆಯ ಮೇರೆಗೆ ಮಹಿಳೆಯರಿಗೆ ಸಂಬಂಧಪಟ್ಟಂತೆ ಕಾಲಕ್ಕನುಗುಣವಾಗಿ ಹೊಸ ಹೊಸ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಲಾಗುತ್ತಿದೆ.

ಕರ್ನಾಟಕ ರಾಜ್ಯವು ಜಿಲ್ಲಾ ಪರಿಷತ್, ತಾಲ್ಲೂಕು ಪಂಚಾಯತ್, ಗ್ರಾಮ ಪಂಚಾಯಿತಿಗಳಲ್ಲಿ ಮಹಿಳೆಯರಿಗೆ ಶೇಕಡ 33 ಸ್ಥಾನಗಳನ್ನು ಕಾದಿರಿಸಿ ದೇಶದಲ್ಲಿ ಅಗ್ರಮಾನ್ಯ ಸ್ಥಾನವನ್ನು ಪಡೆದಿರುವುದಲ್ಲದೆ ಇತರ ರಾಜ್ಯಗಳಿಗೆ ಒಂದು ಮಾದರಿಯಾಗಿದೆ. ಹತ್ತಾರು ಕಡೆಗಳಲ್ಲಿ ಮಹಿಳೆಯರು ಪಂಚಾಯಿತಿಗಳಲ್ಲಿ ಕಾದಿರಿಸಿದ ಸ್ಥಾನಗಳನ್ನಲ್ಲದೆ ಸಾಮಾನ್ಯ ಸ್ಥಾನಗಳಲ್ಲೂ ಸ್ಪರ್ಧಿಸಿ ವಿಜಯಿಗಳಾಗಿರುವುದು ಶುಭಸೂಚಕ.

ರಾಷ್ಟ್ರವು 2001 ನೇ ವರ್ಷವನ್ನು "ಮಹಿಳಾ ಸಶಕ್ತೀಕರಣ ವರ್ಷ" ವನ್ನಾಗಿ ಆಚರಿಸುತ್ತಿರುವ ಈ ಶುಭ ಸಂದರ್ಭದಲ್ಲಿ ಕರ್ನಾಟಕ ರಾಜ್ಯವು ಮಹಿಳಾ ರಾಜ್ಯಪಾಲರನ್ನು, ಮಹಿಳಾ ಮುಖ್ಯ ಕಾರ್ಯದರ್ಶಿಯವರನ್ನು ಹಾಗೂ ಕರ್ನಾಟಕ ರಾಜಧಾನಿಯಾದ ಬೆಂಗಳೂರಿನ ಮಹಾನಗರ ಪಾಲಿಕೆಯಲ್ಲಿ ಮಹಿಳಾ ಮೇಯರ್ ರವರನ್ನು ಹೊಂದಿರುವುದು ಹೆಮ್ಮೆ ಪಡಬೇಕಾದ ವಿಷಯ.

ರಾಜ್ಯದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯನ್ನೂ ಒಳಗೊಂಡಂತೆ ರಾಜ್ಯ ಸರ್ಕಾರದ ಇಪ್ಪತ್ತಾರು ಇಲಾಖೆಗಳು, ಮಹಿಳಾ ಅಭಿವೃದ್ಧಿ ನಿಗಮ, ಮಹಿಳಾ ಆಯೋಗ, ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಸಲಹಾ ಮಂಡಲಿ, ಅನೇಕ ಸ್ವಯಂ ಸೇವಾ ಸಂಸ್ಥೆಗಳು, ಮಹಿಳಾ ಸಹಕಾರಿ ಸಂಘಗಳು, ಮಹಿಳಾ ಬ್ಯಾಂಕುಗಳು ಮುಂತಾದ ಅನೇಕ ಸಂಘ ಸಂಸ್ಥೆಗಳು ವಿವಿಧ ಕ್ಷೇತ್ರಗಳಲ್ಲಿ ರಾಜ್ಯದ 2,20,25,284 (1991) ಮಹಿಳೆಯರ ಅಭಿವೃದ್ಧಿಗಾಗಿ ದುಡಿಯುತ್ತಿವೆ.

ಸ್ತ್ರೀ ಶಕ್ತಿ/ಸ್ವ ಸಹಾಯ ಗುಂಪುಗಳ ಕಾರ್ಯಕ್ರಮ ಮತ್ತೊಂದು ಮಾದರಿಯಾಗುವ ಸಾಮರ್ಥ್ಯ ಹೊಂದಿದೆ. ಒಂದು ಲಕ್ಷ ಗುಂಪುಗಳಲ್ಲಿ 20 ಲಕ್ಷ ಮಹಿಳೆಯರು ಸಕ್ರಿಯವಾಗಿ ಪಾಲ್ಗೊಂಡು ಜಾಗೃತರಾಗಲು, ತಮ್ಮ ವ್ಯಕ್ತಿತ್ವ ಬೆಳೆಸಿಕೊಳ್ಳಲು, ಆರ್ಥಿಕ ಅಭಿವೃದ್ಧಿ ಹೊಂದಿ ತಮ್ಮ ಕಾಲ ಮೇಲೆ ತಾವು ನಿಂತುಕೊಳ್ಳಲು ಅನುಕೂಲವಾಗುತ್ತಿದೆ. ಸಾಂತ್ವನ ಕಾರ್ಯಕ್ರಮ ಕರ್ನಾಟಕದ ಮಹಿಳೆಯರಿಗೆ ಬೆನ್ನೆಲುಬಾಗಲಿದೆ. ಈ ರೀತಿಯ ಆಶಾದಾಯಕ ಪರಿಸ್ಥಿತಿಯ ನಡುವೆಯೂ ಮಹಿಳಾ ಅಭಿವೃದ್ಧಿಯ ಇನ್ನೊಂದು ನಿರಾಶಾದಾಯಕ ಪದರವನ್ನೂ ಅವಲೋಕಿಸಬೇಕು.

ರಾಜ್ಯದಲ್ಲಿ ಲಿಂಗ ಪ್ರಮಾಣವು (Sex Ratio)* 1901ರಲ್ಲಿ 983 ಇದ್ದದ್ದು, 1951ರ ಹೊತ್ತಿಗೆ 966ಕ್ಕೆ ಇಳಿದಿದ್ದು 1991 ರಲ್ಲಿ ಮತ್ತೂ ಇಳಿದು 960 ಇರುವುದು ಆತಂಕ ಪಡಬೇಕಾದ ವಿಷಯ. ಇದಕ್ಕೆ ತದ್ವಿರುದ್ಧವಾಗಿ ಪಕ್ಕದ ರಾಜ್ಯವಾದ ಕೇರಳದಲ್ಲಿ ಲಿಂಗ ಪ್ರಮಾಣವು 1901ರಲ್ಲಿ 1004 ಇದ್ದದ್ದು, 1991ರಲ್ಲಿ 1040ಕ್ಕೆ ಏರಿರುವುದು ಅಲ್ಲಿ ಮಹಿಳೆಯರಿಗಿರುವ ಮಾನ್ಯತೆಯನ್ನು ಸೂಚಿಸುತ್ತದೆ.

ಸಾಮಾಜಿಕ ಸಂಸ್ಕೃತಿ, ಜಾತಿ ಪದ್ಧತಿ ಮತ್ತು ವರ್ಗ ವಿಂಗಡಣೆ ಇವೆಲ್ಲವೂ ಲಿಂಗಭೇದವನ್ನು ಪ್ರಬಲಗೊಳಿಸಿ ಹೆಣ್ಣಿನ ಸ್ಥಾನವನ್ನು ಕೆಳಮಟ್ಟದಲ್ಲಿ ಇಟ್ಟಿದ್ದು, ಮಹಿಳೆಯರಿಗೆ ಗೌರವ ಪೂರ್ವಕವಾದ ಸ್ಥಾನ ದೊರಕಲು ಅಡ್ಡಿಯಾಗಿವೆ. ಹಿಂದುಳಿದ ವರ್ಗಗಳ ಜನರೇ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಕೆಳಮಟ್ಟದಲ್ಲಿರುವಾಗ, ಈ ಜನಾಂಗಗಳ ಮಹಿಳೆಯರ ಸ್ಥಿತಿಗತಿ ಇನ್ನೂ ಹೆಚ್ಚಿನ ಕೆಳಮಟ್ಟದ್ದು, ಹಾಗೂ ಈ ಜನಾಂಗಗಳ ಬಾಲಿಕೆಯರು ಅತ್ಯಂತ ನಿಕೃಷ್ಟ ಮಟ್ಟದಲ್ಲಿದ್ದಾರೆ. ಅದರಲ್ಲೂ ಗ್ರಾಮೀಣ ಮಹಿಳೆಯರು ಗ್ರಾಮೀಣ ಪ್ರದೇಶಗಳ ಪ್ರತಿಕೂಲ ಪರಿಸ್ಥಿತಿಯ ಜೊತೆಗೆ ಮಹಿಳೆಯರೆಂಬ ಕಾರಣದಿಂದಲೂ ಪ್ರತಿಕೂಲ ಪರಿಸ್ಥಿತಿಯಿಂದ ತೊಂದರೆಗೊಳಗಾಗಿರುವುದು ನಾಗರೀಕ ಸಮಾಜವು ಗಮನಿಸಬೇಕಾದ ವಿಷಯ.

ಇದರ ಜೊತೆಗೆ ಅನೇಕ ಕುಟುಂಬಗಳನ್ನು ಕಾಡುತ್ತಿರುವ ಬಡತನವು ಮಹಿಳೆ ಮತ್ತು ಬಾಲಕಿಯರು ಹೀನಾಯ ಪರಿಸ್ಥಿತಿಯಲ್ಲಿರುವುದಕ್ಕೆ ಕಾರಣವಾಗಿದ್ದು ಇಂತಹ ಕುಟುಂಬಗಳಲ್ಲಿ, ಲಿಂಗಭೇದದ ಪರಿಣಾಮ ಇನ್ನೂ ಹೆಚ್ಚು ಪ್ರಬಲವಾಗಿದೆ, ಆದ್ದರಿಂದ ಮಹಿಳಾ ಸಶಕ್ತೀಕರಣವನ್ನು ಒಂದು ಪ್ರತ್ಯೇಕ ಘಟಕವನ್ನಾಗಿ ಪರಿಗಣಿಸಿ, ಮಹಿಳಾ ಅಭಿವೃದ್ಧಿಗೆ ಸಂಬಂಧಪಟ್ಟಂತೆ ಎಲ್ಲ ಅಂಶಗಳನ್ನೂ ಒಳಗೊಂಡಂತೆ ಸಮಗ್ರವಾಗಿ ಪರಿಶೀಲಿಸಬೇಕು.

ರಾಜ್ಯಾದ್ಯಂತ ಬಾಲಕಿಯರ ಅಭಿವೃದ್ಧಿ ಆಗದಿರುವುದಕ್ಕೆ ಪ್ರತಿ ತಂದೆ ತಾಯಿಯರು ತಮ್ಮ ಕುಟುಂಬದ ಹೆಸರು ಮುಂದುವರಿಯಬೇಕಾದರೆ ಗಂಡು ಮಗು ಇರಲೇಬೇಕೆಂಬ ಸಾಂಪ್ರಾದಾಯಿಕ ಮೌಲ್ಯವೇ ಪ್ರಮುಖ ಕಾರಣವಾಗಿದೆ. ಇದರ ಪರಿಣಾಮವಾಗಿ ಆಹಾರ, ಆರೋಗ್ಯ ಶಿಕ್ಷಣ ಮುಂತಾದ ಎಲ್ಲಾ ವಿಷಯಗಳಲ್ಲೂ ಗಂಡು ಮಗುವಿಗೆ ಮೊದಲ ಆದ್ಯತೆಯಿದೆ. ಹೀಗಾಗಿ ಬಾಲಕಿಯರು ತಮ್ಮ ಜೀವನದುದ್ದಕ್ಕೂ ಲಿಂಗಭೇದದ ದುಷ್ಪಭಾವಕ್ಕೆ ಒಳಗಾಗುತ್ತಾರೆ. ಈ ರೀತಿಯ ಲಿಂಗಭೇದವು ರಾಜ್ಯದ ಕೆಲವು ನಗರ ಪ್ರದೇಶಗಳಲ್ಲಿ ಸ್ವಲ್ಪ ಮಟ್ಟಿಗೆ ಕಡಿಮೆಯಾಗುತ್ತಿದ್ದರೂ ಸಹ ಗ್ರಾಮೀಣ ಮಟ್ಟದಲ್ಲಿ ಇನ್ನೂ ಪ್ರಭಾವಶಾಲಿಯಾಗಿಯೇ ಉಳಿದಿದೆ. ಗಂಡು ಮಗುವಿನಷ್ಟೇ ಆದ್ಯತೆ ಹೆಣ್ಣು ಮಗುವಿಗೂ ದೊರೆಯುವವರೆಗೆ ಬಾಲಕಿಯರ ಹಾಗೂ ಮಹಿಳೆಯರ ಅಭಿವೃದ್ಧಿ ಪೂರ್ಣವಾಗುವುದಿಲ್ಲವೆಂಬ ಮನೋಭಾವನೆ ಸಮಾಜದಲ್ಲಿ ಬೆಳೆಯುವಂತಹ ವಾತಾವರಣ ಸೃಷ್ಟಿಯಾಗಬೇಕು.

ಕುಟುಂಬಗಳಲ್ಲಿ ಹಾಗೂ ಸಮಾಜದಲ್ಲಿ ಮಹಿಳೆಯರು ನಿಕೃಷ್ಠರು ಎಂಬ ಧೋರಣೆಯು ಎಲ್ಲಾ ವರ್ಣದ ಮತ್ತು ವರ್ಗದ ಜನರಲ್ಲಿ ಶತಮಾನಗಳಿಂದ ಬೇರೂರಿದೆ. ಈ ಧೋರಣೆ ಬದಲಾಗುವವರೆಗೆ ಸರ್ಕಾರ ಹಾಗೂ ಯಾವುದೇ ಸಂಘ ಸಂಸ್ಥೆಗಳು ಎಷ್ಟೇ ಪ್ರಯತ್ನಪಟ್ಟರೂ ಮಹಿಳೆಯರ ಸುಧಾರಣೆಯಾಗುವುದಿಲ್ಲ. ಆದ್ದರಿಂದ ಪ್ರಥಮವಾಗಿ ಈ ಮನೋಧೋರಣೆಯಲ್ಲಿ ಬದಲಾವಣೆ ತರುವ ಎಲ್ಲಾ ಪ್ರಯತ್ನಗಳನ್ನೂ ಸಬಲಗೊಳಿಸಬೇಕು. ಇದರ ಜೊತೆಜೊತೆಗೆ ಮಹಿಳೆಯರ ಶಿಕ್ಷಣ, ಆರೋಗ್ಯ, ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳು ಹೆಚ್ಚಿನ ಪ್ರಮಾಣದಲ್ಲಿ ವಿಸ್ತಾರಗೊಳ್ಳಬೇಕು, ರಾಜಕೀಯದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯ ಪ್ರಯತ್ನಗಳೂ ತ್ವರಿತವಾಗಿ ವಿಸ್ತಾರಗೊಳ್ಳಬೇಕಾಗಿದೆ.

1989ರಲ್ಲಿ ಭಾರತ ಸರ್ಕಾರವು 2000 ವರ್ಷದವರೆಗೆ ಮಹಿಳೆಯರ ಸಶಕ್ತೀಕರಣಕ್ಕಾಗಿ ತೆಗೆದುಕೊಳ್ಳಬೇಕಾದ ನೀತಿ ಮತ್ತು ಕಾರ್ಯಕ್ರಮಗಳ ಬಗ್ಗೆ ನೆರವಾಗುವಂತೆ **"ಮಹಿಳೆಯರಿಗಾಗಿ ರಾಷ್ಟ್ರೀಯ ಯೋಜನೆ"** (National Perspective Plan for Women1988-2000 )ಯನ್ನು ಅಂಗೀಕರಿಸಿತು. ಈ ಯೋಜನೆಯನ್ವಯ ಕಳೆದ ಅನೇಕ ದಶಕಳಿಂದ ರಾಷ್ಟ್ರದಲ್ಲಿ ನಡೆಯುತ್ತಿರುವ ಮಹಿಳಾ ಆಂದೋಲನದ ಅನುಭವದ ಆಧಾರದ ಮೇಲೆ ರಾಷ್ಟ್ರವು ಮಹಿಳೆಯರಿಗಾಗಿ ರಾಷ್ಟ್ರೀಯ ನೀತಿಯೊಂದನ್ನು ರಚಿಸಬೇಕೆಂದು ಪ್ರಮುಖ ಸಲಹೆ ಮಾಡಲಾಗಿತ್ತು ಅನಂತರ 1995ರಲ್ಲಿ ಚೀನಾ ದೇಶದ ರಾಜಧಾನಿಯಾದ ಬೀಜಿಂಗ್‌ನಲ್ಲಿ ನಡೆದ ನಾಲ್ಕನೇ ವಿಶ್ವ ರಾಷ್ಟ್ರ ಸಂಸ್ಥೆಯ ಅಂತರರಾಷ್ಟ್ರೀಯ ಮಹಿಳಾ ಸಮ್ಮೇಳನದಲ್ಲಿ ಭಾರತ ವು ರಾಷ್ಟ್ರೀಯ ಮಹಿಳಾ ನೀತಿಯನ್ನು ರೂಪಿಸಿ

*Sex Ratio ಪ್ರತಿ ಒಂದು ಸಾವಿರ ಪುರುಷರಿಗಿರುವ ಮಹಿಳೆಯರ ಸಂಖ್ಯೆ

ಕಾರ್ಯಗತಗೊಳಿಸುವುದಕ್ಕೆ ಬದ್ಧವಾಯಿತು. ಇದಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರಗಳೊಡನೆ ಹಾಗೂ ರಾಷ್ಟ್ರಾದ್ಯಂತ ಶ್ರಮಿಸುತ್ತಿರುವ ಅನೇಕ ಸ್ವಯಂ ಸೇವಾ ಸಂಸ್ಥೆಗಳೊಡನೆ ಚರ್ಚಿಸಿ 1996 ರಲ್ಲಿ ಕರಡು ನೀತಿಯೊಂದನ್ನು ರೂಪಿಸಲಾಯಿತು. ಈ ಮಧ್ಯೆ ಲೋಕಸಭಾ ಚುನಾವಣೆ ಬಂದಿದ್ದರಿಂದ ಈ ಕರಡು ಯೋಜನೆಗೆ ಸಂಸತ್ತಿಗೆ ಒಪ್ಪಿಗೆಯ ಕಾರ್ಯ ಸ್ಥಗಿತಗೊಂಡಿತು. ಸುದೈವವಶಾತ್ ತಮಿಳುನಾಡು, ಮಹಾರಾಷ್ಟ್ರ, ಆಂಧ್ರ ಪ್ರದೇಶ ಮತ್ತು ಮಧ್ಯ ಪ್ರದೇಶ ರಾಜ್ಯಗಳು ಈ ಕರಡು ನೀತಿಯ ಆಧಾರದ ಮೇಲೆ ತಮ್ಮ ರಾಜ್ಯಕ್ಕೆ ಸೂಕ್ತವಾದ ಮಹಿಳಾ ಅಭಿವೃದ್ಧಿಗಾಗಿ ರಾಜ್ಯ ಯೋಜನೆಗಳನ್ನು ತಯಾರಿಸಿದವು, ಇತ್ತೀಚಿಗಿನ ಚಿಂತನೆಯ ಪ್ರಕಾರ, ವಿಶ್ವ ಸಂಸ್ಥೆ ಅಭಿವೃದ್ಧಿ ಯೋಜನೆ (UNDP)ಯ ಮಾನವ ಅಭಿವೃದ್ಧಿ ವರದಿಯ ಆಧಾರದ ಮೇಲೆ, ರಾಜ್ಯ ಯೋಜನೆಗಳನ್ನು ತಯಾರಿಸಿ ಲಿಂಗಭೇದ ಪರಿಹಾರಕ್ಕೆ ಸಂಬಂಧಪಟ್ಟಂತೆ ಹೆಚ್ಚು ಒತ್ತು ಕೊಡುವುದಾಗಿದೆ.

ಶಿಕ್ಷಣ, ಆರ್ಥಿಕ, ರಾಜಕೀಯ ಮತ್ತು ಇನ್ನಿತರ ಯಾವುದೇ ರೀತಿಯ ಚಟುವಟಿಕೆಗಳಲ್ಲಿ ಮಹಿಳೆಯರು ಭಾಗವಹಿಸಬೇಕಾದರೆ, ಕುಟುಂಬದಲ್ಲಿ ಅವಳ ಮೂಲಭೂತ ಕರ್ತವ್ಯಗಳೆಂದು ಪರಿಗಣಿಸಲ್ಪಟ್ಟಿರುವ ಊಟೋಪಚಾರ, ಪಶು ಆಹಾರ, ಉರುವಲು ಹಾಗೂ ನೀರಿನ ಸಂಗ್ರಹಣೆ, ಮಕ್ಕಳ ಪಾಲನೆ ಪೋಷಣೆ ಮುಂತಾದ ವಿಷಯಗಳಲ್ಲಿ ಸಮಾಜದ ಧೋರಣೆಯನ್ನು ಬದಲು ಮಾಡುವ ಮತ್ತು ಈ ಕಾರ್ಯಗಳಲ್ಲಿ ಆಕೆಗೆ ನೆರವಾಗುವ ಸಾಮಾಜಿಕ ಹಾಗೂ ಕೌಟುಂಬಿಕ ಪರಿಸ್ಥಿತಿಗಳು ಗಮನಾರ್ಹವಾಗಿ ಬದಲಾಗುವಂತಹ ಶೈಕ್ಷಣಿಕ ಕಾರ್ಯಕ್ರಮಗಳನ್ನು ಸಾರ್ವತ್ರಿಕವಾಗಿ ಹಮ್ಮಿಕೊಳ್ಳಬೇಕು.

ಮಹಿಳೆಯರಿಗೆ ಸಂಬಂಧಪಟ್ಟ ಸರ್ಕಾರ ಮತ್ತು ಸರ್ಕಾರೇತರ ಯೋಜನೆಗಳಲ್ಲಿ ನಿಗದಿತ ಹಣವು ಪೂರ್ಣ ಪ್ರಮಾಣದಲ್ಲಿ ಖರ್ಚಾದರೆ (ಅನುಬಂಧ 2) ಹಾಗೂ ಕೆಲವು ಯೋಜನೆಗಳ ಆರ್ಥಿಕ ಸಹಾಯದಲ್ಲಿ ಮೀಸಲಾತಿ ಹೆಚ್ಚಾದರೆ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳು ಸತ್ವಶಾಲಿಯಾಗಿ ತಮ್ಮ ಗುರಿಯನ್ನು ಮುಟ್ಟುತ್ತವೆ ಎಂಬ ಆಶಯವಿದೆ.

ಮಹಿಳಾ ಅಭಿವೃದ್ಧಿ ಮತ್ತು ಸಶಕ್ತೀಕರಣ ಆಗುವವರೆಗೆ ಯಾವುದೇ ಸಮಾಜವು ರಾಷ್ಟ್ರವು ಮುಂದುವರಿಯಲು ಸಾಧ್ಯವಿಲ್ಲ ಎಂಬುದನ್ನು ತನ್ನ ವಾರ್ಷಿಕ ವರದಿಗಳಲ್ಲಿ ವಿಶ್ವ ಬ್ಯಾಂಕ್ ನಿರ್ದಿಷ್ಟವಾಗಿ ಸೂಚಿಸಿದೆ. ಇದರಿಂದ ಮಹಿಳಾ ಸಶಕ್ತೀಕರಣವಾಗದಿದ್ದರೆ ರಾಜ್ಯದ ಪ್ರಗತಿ ಪೂರ್ಣವಾಗುವುದಿಲ್ಲವೆಂಬುದನ್ನು ಗಮನಿಸಬೇಕು. ಮಹಿಳೆಯರನ್ನು ಅಭಿವೃದ್ಧಿ ಕಾರ್ಯಕ್ರಮದಲ್ಲಿ ತೊಡಗಿಸುವುದು ಮತ್ತು ಕುಟುಂಬ ಮತ್ತು ಸಮಾಜದಲ್ಲಿ ಅವರನ್ನು ಸಶಕ್ತ ಪಾಲುದಾರರನ್ನಾಗಿ ಮಾಡುವುದು ಅತ್ಯವಶ್ಯಕ. ಈ ಪಾಲುದಾರಿಕೆಯ ಭಾಗವಾಗಿ ಮಹಿಳೆಯರಿಗೆ ಶಿಕ್ಷಣ ನೀಡುವುದು, ಅವರ ಆರೋಗ್ಯ ಸುಧಾರಿಸುವುದು, ಶೌಚಾಲಯ ಮತ್ತು ಕುಡಿಯುವ ನೀರನ್ನು ಒಳಗೊಂಡಂತೆ ಮೂಲಭೂತ ಸೌಲಭ್ಯವನ್ನು ಒದಗಿಸುವುದು ಮುಖ್ಯವಾಗಿವೆ. ಹೀಗೆಯೇ ಮಹಿಳೆಯರಿಗೆ ಉದ್ಯೋಗಾವಕಾಶ ದೊರಕಿಸುವುದು ಮತ್ತು ರಾಜಕೀಯದ ಎಲ್ಲಾ ಹಂತಗಳಲ್ಲಿ ಸಶಕ್ತ ಪಾಲುದಾರರನ್ನಾಗಿಸುವುದು ಅತ್ಯವಶ್ಯಕ. ಮಹಿಳೆ, ಉದ್ಯೋಗ ಮತ್ತು ರಾಜಕೀಯದಲ್ಲಿ ಸಕ್ರಿಯವಾಗಿ ಪಾತ್ರವಹಿಸಬೇಕಾದರೆ ಆಕೆಯ ಕುಟುಂಬದಲ್ಲಿ ಅವಳ ಜವಾಬ್ದಾರಿಯನ್ನು ಪುರುಷರು ಹಂಚಿಕೊಳ್ಳಬೇಕು ಹಾಗೂ ತಮ್ಮ ಕುಟುಂಬಗಳಲ್ಲಿ ಮಹಿಳೆಯು ಒಂದು ಪ್ರಮುಖ ಅಂಗ ಮತ್ತು ಮಹಿಳೆಯ ಅಭಿವೃದ್ಧಿ ಆಗದಿದ್ದರೆ ಕುಟುಂಬದ ಪೂರ್ಣ ಪ್ರಗತಿಯಾಗುವುದಿಲ್ಲವೆಂಬುದು ಪುರುಷರಲ್ಲಿ ಮನವರಿಕೆಯಾಗಬೇಕು.

ವಿಶ್ವ ಸಂಸ್ಥೆಯ ಅಭಿವೃದ್ಧಿ ಯೋಜನೆ (UNDP) ಕ್ರಮ ವಿಧಾನದ ರೀತಿಯ 1991ನೇ ಸಾಲಿಗೆ ಕರ್ನಾಟಕ ರಾಜ್ಯದ ಲಿಂಗ ಸಂಬಂಧಿತ ಅಭಿವೃದ್ಧಿ ಸೂಚ್ಯಾಂಕ *(ಜಿಡಿಐ) (Gender Development Index) 0.451)

---

*ಜಿಡಿಐ (Gender Development Index) ಜನನ ಕಾಲದ ಆಯು ಪ್ರಮಾಣ, ಪ್ರಾಥಮಿಕ, ಮಾಧ್ಯಮಿಕ ಹಾಗೂ ತೃತೀಯ ಮಟ್ಟಗಳಲ್ಲಿನ ನೊಂದಣಿ ಅನುಪಾತಗಳೊಂದಿಗೆ ಒಗ್ಗೂಡಿಸಿದ ವಯಸ್ಕರ ಸಾಕ್ಷರತೆ, ಸೂಕ್ತವಾಗಿ ತೂಕ ಮಾಡಲಾದ ಮತ್ತು ಖರೀದಿಸುವ ಶಕ್ತಿ (Purchasing Power) ಆಧಾರದ ಮೇಲೆ ಜಿಡಿಐ ಲಿಂಗ ಸಂಬಂಧಿತ ತಾರತಮ್ಯಗಳನ್ನು ಮಾಪನ ಮಾಡುತ್ತದೆ

ಆಗಿದ್ದು, ಹದಿನೆಂಟು ಜಿಲ್ಲೆಗಳು (ಬಳ್ಳಾರಿ, ಬೀದರ್, ಗುಲಬರ್ಗಾ, ಮೈಸೂರು, ಚಾಮರಾಜನಗರ, ರಾಯಚೂರು, ಕೊಪ್ಪಳ, ಬಿಜಾಪುರ, ಬಾಗಲಕೋಟೆ, ಬೆಳಗಾವಿ, ಚಿತ್ರದುರ್ಗ, ದಾವಣಗೆರೆ, ಧಾರವಾಡ, ಗದಗ, ಹಾವೇರಿ, ಕೋಲಾರ, ಮಂಡ್ಯ, ತುಮಕೂರು) ರಾಜ್ಯದ ಜಿಡಿಐಗಿಂತ ಕಡಿಮೆ, ಪ್ರಮಾಣದಲ್ಲಿದ್ದು, ರಾಯಚೂರು ಜಿಲ್ಲೆ ಜಿಡಿಐನಲ್ಲಿ ಅತ್ಯಂತ ಕನಿಷ್ಠ ಪ್ರಮಾಣದಲ್ಲಿದೆ ಕೇವಲ ಒಂಭತ್ತು ಜಿಲ್ಲೆಗಳು (ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಉಡುಪಿ, ಹಾಸನ, ಕೊಡಗು, ಶಿವಮೊಗ್ಗ, ಉತ್ತರ ಕನ್ನಡ) ರಾಜ್ಯದ **ಜಿಡಿಐ**ಗಿಂತ ಹೆಚ್ಚಿನ ಪ್ರಮಾಣದಲ್ಲಿದ್ದು, ಕೊಡಗು ಜಿಲ್ಲೆ ಜಿಡಿಐ ನಲ್ಲಿ ಅತ್ಯಂತ ಗರಿಷ್ಠ ಪ್ರಮಾಣದಲ್ಲಿದೆ (ಅನುಬಂಧ -3) ಜಿಲ್ಲೆಗಳ ನಡುವೆ ಜಿಡಿಐ ನಲ್ಲಿರುವ ಈ ಅಸಮಾನತೆ ರಾಜ್ಯದಲ್ಲಿ ಮಹಿಳೆಯರ ಸ್ಥಾನಮಾನ ಹೆಚ್ಚಿಸುವುದರಲ್ಲಿ ತ್ವರಿತವಾಗಿ ಆಗಬೇಕಾದ ಪ್ರಯತ್ನಗಳ ಒಂದು ದಿಕ್ಸೂಚಿಯಾಗಿದೆ.

ದಿನಾಂಕ 8, ಮಾರ್ಚ್ 2000ದ ವಿಶ್ವ ಮಹಿಳಾ ದಿನಾಚರಣೆಯ ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣರವರು ತಮ್ಮ ಭಾಷಣದಲ್ಲಿ, ರಾಜ್ಯದ ಮಹಿಳೆಯರ ಅಭಿವೃದ್ಧಿಗಾಗಿ ಸರ್ಕಾರ ಬದ್ಧವಾಗಿದೆಯೆಂದೂ ಇದಕ್ಕೆ ಪೂರಕವಾಗಿ ಒಂದು ಕ್ರಿಯಾ ಯೋಜನಾ ಸಮಿತಿಯನ್ನು ರಚಿಸಲಾಗುವುದೆಂದೂ ಘೋಷಿಸಿದರು. ಈ ಘೋಷಣೆಯ ಅನ್ವಯ ದಿನಾಂಕ 5ನೇ ಜೂನ್ 2000 ದಂದು ಸರ್ಕಾರಿ ಆದೇಶ ಸಂಖ್ಯೆ ಮ.ಮ. ಅ 2000 ಮೇರೆಗೆ ಮಹಿಳಾ ಸಮಗ್ರ ಅಭಿವೃದ್ಧಿ ಕ್ರಿಯಾ ಯೋಜನಾ ಸಮಿತಿ (Task Force on Women Empowrment) ಯನ್ನು ರಚಿಸಲಾಯಿತು. (ಅನುಬಂಧ-4) ಈ ಸಮಿತಿಯು ಆದಷ್ಟು ಬೇಗ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವಂತೆ ಈ ಆದೇಶದಲ್ಲಿ ನಮೂದಿಸಲಾಗಿದೆ.

ಈ ಸಮಿತಿಯು ದಿನಾಂಕ 17 ಜುಲೈ 2000 ದಿಂದ 27 ಫೆಬ್ರವರಿ 2001ರ ವರೆಗೆ ಒಟ್ಟು ಹದಿನಾರು ಸಭೆಗಳನ್ನು ನಡೆಸಿ (ಅನುಬಂಧ - 5) ಮಹಿಳಾ ಅಭಿವೃದ್ಧಿಗೆ ಸಂಬಂಧಪಟ್ಟಂತೆ ಅನೇಕ ವಿಷಯಗಳನ್ನು ಅಭ್ಯಸಿಸಿತು. ಈ ಹದಿನಾರು ಸಭೆಗಳ ಪೈಕಿ ಐದು ಸಭೆಗಳಲ್ಲಿ ಪ್ರತ್ಯೇಕವಾಗಿ ರಾಜ್ಯದ ಹಿರಿಯ ಮಹಿಳಾ ರಾಜಕಾರಣಿಗಳು, ಸಮಾಜ ಕಾರ್ಯಕರ್ತರು, ಲೇಖಕಿಯರು ಹಾಗೂ ಮಹಿಳೆಯರ ವಿಷಯಕ್ಕೆ ಸ್ಪಂದಿಸಿ ಬರೆದ ಲೇಖಕರು, ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆ ಸಂಸ್ಥೆಯ (Institute of Social and Economic Change) ತಜ್ಞರು ಹಾಗೂ ಸರ್ಕಾರದ ಹಿರಿಯ ಮಹಿಳಾ ಅಧಿಕಾರಿಗಳನ್ನು ಆಹ್ವಾನಿಸಿ ಅವರ ಅಭಿಪ್ರಾಯಗಳನ್ನು ಕ್ರೋಢಿಕರಿಸಲಾಯಿತು. (ಈ ಸಭೆಗಳಲ್ಲಿ ಭಾಗವಹಿಸಿದವರ ಪಟ್ಟಿಯನ್ನು ಅನುಬಂಧ - 6 ರಲ್ಲಿ ಲಗತ್ತಿಸಲಾಗಿದೆ) ರಾಷ್ಟ್ರೀಯ ಮಹಿಳಾ ಸಶಕ್ತೀಕರಣ ಸಮಿತಿಯ (National Women Empowerment Committee) ಸಭೆ ಬೆಂಗಳೂರಿನಲ್ಲಿ ನಡೆದಾಗ ಮಹಿಳಾ ಕ್ರಿಯಾ ಯೋಜನಾ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರು ವಿಶೇಷ ಆಹ್ವಾನಿತರಾಗಿ ಭಾಗವಹಿಸಿದ್ದರು. ಹೀಗೆಯೇ ಪಶ್ಚಿಮ ಬಂಗಾಳದ ವಿಧಾನ ಸಭೆಯ ಸದಸ್ಯರು ಬೆಂಗಳೂರಿಗೆ ಭೇಟಿ ನೀಡಿದಾಗಲೂ ಸಹ ಅಧ್ಯಕ್ಷರು ಹಾಗೂ ಸದಸ್ಯರು ನಿಯೋಗದೊಡನೆ ಚರ್ಚೆ ನಡೆಸಿದರು.

ಇದಲ್ಲದೆ ಗುಲಬರ್ಗಾ ಮತ್ತು ಬೆಳಗಾವಿ ವಿಭಾಗಗಳಲ್ಲಿ ಪ್ರತ್ಯೇಕವಾಗಿ ಒಂದೊಂದು ದಿನದ ಕಾರ್ಯಗಾರ ಹಾಗೂ ಬೆಂಗಳೂರಿನಲ್ಲಿ ಸ್ವಯಂ ಸೇವಾ ಸಂಸ್ಥೆಗಳ ವಿಚಾರ ಸಂಕಿರಣಗಳನ್ನು ನಡೆಸಿ ಜಿಲ್ಲಾ ಪಂಚಾಯತ್ ಮಹಿಳಾ ಸದಸ್ಯರು, ಕೃಷಿ ಮಹಿಳೆಯರು, ಲೇಖಕಿಯರು, ವೈದ್ಯರು, ಸಮಾಜ ಸೇವಾ ಕಾರ್ಯಕರ್ತರು. ಮುಂತಾದ ವಿವಿಧ ವರ್ಗದ ಮಹಿಳೆಯರ ಅಭಿಪ್ರಾಯಗಳನ್ನು "ಮಹಿಳಾ ಸಶಕ್ತೀಕರಣದಲ್ಲಿ ಶಿಕ್ಷಣದ ಮಹತ್ವ" "ಮಹಿಳಾ ಆರೋಗ್ಯ", ಮಹಿಳೆಯರ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ" "ಮಹಿಳಾ ಆರ್ಥಿಕ ಸ್ವಾವಲಂಬನೆ" "ರಾಜಕಾರಣದಲ್ಲಿ ಮಹಿಳಾ ಸಶಕ್ತೀಕರಣ" ಹಾಗೂ "ರೈತ ಮಹಿಳೆಯರ ಸಮಸ್ಯೆಗಳಿಗೆ ಪರಿಹಾರ" ಈ ವಿಷಯಗಳ ಮೇಲೆ ಪ್ರತ್ಯೇಕವಾಗಿ ಅಭಿಪ್ರಾಯಗಳನ್ನು ಸಂಗ್ರಹಿಸಲಾಯಿತು.

ಈ ಅಭಿಪ್ರಾಯಗಳ ಆಧಾರದ ಮೇಲೆ ಮತ್ತು ಕರ್ನಾಟಕ ರಾಜ್ಯದಲ್ಲಿ ಮಹಿಳೆಯರ ಅಭಿವೃದ್ಧಿಗೆ ಸಂಬಂಧಪಟ್ಟ ಹಲವು ಅಂಕಿ ಅಂಶಗಳ ಆಧಾರದ ಮೇಲೆ ಕ್ರಿಯಾ ಯೋಜನಾ ಸಮಿತಿಯು ಈ ಮಧ್ಯಂತರ ವರದಿಯನ್ನು ತಯಾರಿಸಿದ್ದು, ಇನ್ನೂ ಹೆಚ್ಚಿನ ವಿಷಯಗಳನ್ನು ಸಂಗ್ರಹಿಸುವುದಲ್ಲದೆ, ಮೈಸೂರು ಮತ್ತು ಬೆಂಗಳೂರು ವಿಭಾಗೀಯ ಮಟ್ಟದ ಹಾಗೂ ಜಿಲ್ಲಾ ಮಟ್ಟದ ಕಾರ್ಯಾಗಾರಗಳನ್ನು ಇತರ ಜಿಲ್ಲೆಗಳಲ್ಲಿ ನಡೆಸಿ, ವಿವಿಧ ಸಂಘ-ಸಂಸ್ಥೆಗಳು ಹಾಗೂ ಮಹಿಳೆಯರ ಗುಂಪುಗಳ ಜೊತೆ ಚರ್ಚಿಸಿ ಅಂತಿಮ ವರದಿಯನ್ನು ತಯಾರಿಸುತ್ತದೆ.

ಹೀಗೆಯೇ, ಜನಗಣತಿ 2001ರ ತಾತ್ಕಾಲಿಕ ವರದಿಯು ಸದ್ಯದಲ್ಲಿ ಹೊರಬರಲಿದ್ದು, ಇದರಲ್ಲಿ ಬರುವ ಅಂಕಿ ಅಂಶಗಳನ್ನು ಪರಿಶೀಲಿಸಿ ರಾಜ್ಯದಲ್ಲಿ ಮಹಿಳಾ ಅಭಿವೃದ್ಧಿಗೆ ಸೂಕ್ತವಾದ ಇನ್ನೂ ಹೆಚ್ಚಿನ ಅಂಶಗಳನ್ನು ಅಂತಿಮ ವರದಿಯಲ್ಲಿ ನೀಡಲಾಗುವುದು.

ಈ ಮಧ್ಯಂತರ ವರದಿಯಲ್ಲಿ ಮಾಡಿರುವ ಸಲಹೆಗಳಲ್ಲಿ ಕೆಲವನ್ನು ತ್ವರಿತವಾಗಿ ಕಾರ್ಯರೂಪಕ್ಕೆ ತರಬಹುದಾಗಿದೆ. ಇನ್ನೂ ಕೆಲವು ಸಲಹೆಗಳನ್ನು ಕಡಿಮೆ ಅವಧಿಯಲ್ಲಿ ಅನುಷ್ಠಾನಕ್ಕೆ ತರಬಹುದಾಗಿದೆ. ಇವಲ್ಲದೆ ಮಹಿಳಾ ಅಭಿವೃದ್ಧಿ, ಲಿಂಗ ಸಮಾನತೆಯ ಆಧಾರದ ಮೇಲೆ ಬೇರೂರುವಂತೆ ಧೀರ್ಘಾವಧಿ ಕಾಲದ ಸಲಹೆಗಳನ್ನು ಸಹ ಈ ವರದಿಯಲ್ಲಿ ಮಾಡಲಾಗಿದೆ.

ಹೀಗೆಯೇ ಮಹಿಳಾ ಅಭಿವೃದ್ಧಿಗಾಗಿ ಈಗಾಗಲೇ ಇರುವ ಕೆಲವು ಉತ್ತಮ ಕಾರ್ಯಕ್ರಮಗಳನ್ನು ವಿಸ್ತರಿಸಬೇಕಾಗಿದೆ, ಇನ್ನೂ ಕೆಲವು ಕಾರ್ಯಕ್ರಮಗಳಲ್ಲಿ ಸೂಕ್ತ ಬದಲಾವಣೆಗಳನ್ನು ತರಬೇಕಾಗಿದೆ ಹಾಗೂ ಕೆಲವು ಹೊಸ ಕಾರ್ಯಕ್ರಮಗಳನ್ನು ರೂಪಿಸಿ, ಅದರಲ್ಲಿ ಸರ್ಕಾರ ಮತ್ತು ಸರ್ಕಾರೇತರ ಸಂಘ-ಸಂಸ್ಥೆಗಳ ಪ್ರಯತ್ನಗಳಿಂದ ಮಹಿಳಾ ಸಶಕ್ತೀಕರಣಕ್ಕೆ ಅನುಕೂಲಮಾಡಿಕೊಡುವ ಅವಶ್ಯಕತೆ ಇದೆ. **ಒಟ್ಟಿನಲ್ಲಿ ಮಹಿಳೆಯು ಕುಟುಂಬದ ಹಾಗೂ ಸಮಾಜದ ಗೌರವಯುತವಾದ ಹಾಗೂ ಸಮಾನವಾದ ಅಂಗವಾಗುವಂತೆ ರಾಜ್ಯವನ್ನು ಪುನರ್ ನಿರ್ಮಾಣ ಮಾಡಬೇಕಾಗಿದೆ.** ಈಗಾಗಲೇ ಹೇಳಿರುವಂತೆ ಮಹಿಳೆಯರ ಅಭಿವೃದ್ಧಿಯಾಗದ ಹೊರತು ರಾಜ್ಯದ ಅಭಿವೃದ್ಧಿ ಪೂರ್ಣವಾಗದು.

ಮಹಿಳಾ ಅಭಿವೃದ್ಧಿಗೆ ಸಂಬಂಧಪಟ್ಟಂತೆ ಸರ್ಕಾರದಿಂದ ಈ ಮುಂಚೆ ರಚಿಸಲ್ಪಟ್ಟಿದ್ದ ವಿವಿಧ ಸಮಿತಿಗಳು ಅನೇಕ ಸಲಹೆಗಳನ್ನು ಮಾಡಿವೆ. ದುರದೃಷ್ಟವಶಾತ್ ಇಂತಹ ಸಲಹೆಗಳಲ್ಲಿ ಕೇವಲ ಕೆಲವು ಸಲಹೆಗಳು ಮಾತ್ರ ಅನುಷ್ಠಾನಕ್ಕೆ ಬಂದಿದ್ದು ಹೆಚ್ಚಿನ ಸಲಹೆಗಳು ಕಾಲಾನುಕ್ರಮದಲ್ಲಿ ಕಡೆಗಾಣಿಸಲ್ಪಟ್ಟಿವೆ ಅಥವಾ ಸಂಪೂರ್ಣವಾಗಿ ಮರೆಯಲ್ಪಟ್ಟಿವೆ. ಮಹಿಳಾ ಅಭಿವೃದ್ಧಿ ಕ್ರಿಯಾ ಯೋಜನಾ ಸಮಿತಿಯ ಈ ಮಧ್ಯಂತರ ವರದಿಯಲ್ಲಿ ಸಲ್ಲಿಸಿರುವ ಸಲಹೆಗಳು ಕಡೆಗಾಣಿಸಲ್ಪಡದೆ ಅನುಷ್ಠಾನಗೊಳಿಸುವಲ್ಲಿ ಸರ್ಕಾರ, ಸರ್ಕಾರದ ಸಂಬಂಧಪಟ್ಟ ಇಲಾಖೆಗಳ ಸೂಕ್ತ ಗಮನ ಹರಿಸಿದರೆ ಕರ್ನಾಟಕ ರಾಜ್ಯದಲ್ಲಿ ಮಹಿಳೆಯರ ಪ್ರಗತಿ ತನ್ಮೂಲಕ ಮಹಿಳಾ ಸಶಕ್ತೀಕರಣದ ಪ್ರಕ್ರಿಯೆ ಪ್ರಬಲವಾಗುತ್ತದೆ ಎಂಬ ಆಶಯ ಕ್ರಿಯಾ ಯೋಜನಾ ಸಮಿತಿಗೆ ಇದೆ.

ಈ ಮಧ್ಯಂತರ ವರದಿಯನ್ನು ತಯಾರಿಸುವಾಗ ಸರ್ಕಾರ ಡಾ. ರಾಜಾರಾಮಣ್ಣ ರವರ ನೇತೃತ್ವದಲ್ಲಿ ರಚಿಸಿರುವ ಶಿಕ್ಷಣ ಇಲಾಖೆಗೆ ಸಂಬಂಧಿಸಿದ ಹಾಗೂ ಡಾ. ಹೆಚ್. ಸುದರ್ಶನ್ ರವರ ನೇತೃತ್ವದಲ್ಲಿ ರಚಿಸಿರುವ ಆರೋಗ್ಯ ಕಾರ್ಯತಂಡಗಳ ಮಧ್ಯಂತರ ವರದಿಗಳನ್ನು ಪರಿಶೀಲಿಸಿದ್ದು ಈ ಕಾರ್ಯತಂಡಗಳ ವ್ಯಾಪ್ತಿಗೆ ಬರುವ ವಿಷಯಗಳನ್ನೂ ಮಹಿಳಾ ಸಶಕ್ತೀಕರಣದ ಹಿನ್ನಲೆಯಲ್ಲಿ ಗಣನೆಗೆ ತೆಗೆದುಕೊಳ್ಳಲು ಮಹಿಳಾ ಅಭಿವೃದ್ಧಿ ಕ್ರಿಯಾ ಯೋಜನಾ ಸಮಿತಿಯು ಪ್ರಯತ್ನ ಪಟ್ಟಿದೆ.

ಮಹಿಳಾ ಶಿಕ್ಷಣ ಮತ್ತು ಸಾಕ್ಷರತೆ, ಮಹಿಳಾ ಆರೋಗ್ಯ, ಮಹಿಳಾ ಆರ್ಥಿಕ ಅಭಿವೃದ್ಧಿ, ಕೃಷಿ ಮಹಿಳೆಯರು ಮತ್ತು ಉದ್ಯೋಗ ಮತ್ತು ತರಬೇತಿ, ಮಹಿಳೆಯರ ಮೇಲೆ ದೌರ್ಜನ್ಯ ಮತ್ತು ಅತ್ಯಾಚಾರ ಹಾಗೂ ರಾಜಕೀಯದಲ್ಲಿ ಮಹಿಳಾ ಸಶಕ್ತೀಕರಣ, ಎಂಬ ಆರು ವಿಭಾಗಗಳಲ್ಲಿ ಈ ಮಧ್ಯಂತರ ವರದಿಯನ್ನು ತಯಾರಿಸಲಾಗಿದ್ದು, ಪ್ರತಿ ವಿಭಾಗದಲ್ಲೂ ಪ್ರತ್ಯೇಕ ಸಲಹೆಗಳನ್ನು ನೀಡಲಾಗಿದೆ.

ಸರ್ಕಾರದ ಅನೇಕ ಇಲಾಖೆಗಳು, ಜಿಲ್ಲಾ ಪಂಚಾಯತ್, ತಾಲೂಕು ಪಂಚಾಯತ್ ಮತ್ತು ಗ್ರಾಮ ಪಂಚಾಯಿತಿಗಳು ಮಹಿಳಾ ಅಭಿವೃದ್ಧಿಗಾಗಿ ತೆಗೆದುಕೊಳ್ಳಬೇಕಾಗಿರುವ ಕಾರ್ಯಾನುಷ್ಠಾನಗಳ ಜವಾಬ್ದಾರಿಯಲ್ಲಿ ಇನ್ನೂ ಸ್ಪಷ್ಟವಾದ ವಿಂಗಡಣೆ ಆಗಬೇಕಾಗಿರುವುದರಿಂದ ಕೆಲವು ಯೋಜನೆಗಳು ಪೂರ್ಣ ಪ್ರಮಾಣದಲ್ಲಿ ಕಾರ್ಯಗತಗೊಂಡಿಲ್ಲ. ಇದಲ್ಲದೆ, ಈ ಕಾರ್ಯಕ್ರಮಗಳ ಅನುಷ್ಠಾನದಿಂದ ಫಲಾನುಭವಿಗಳಿಗೆ ಉಪಯೋಗವಾಗಿದೆಯೇ ಇಲ್ಲವೇ ಎಂಬ ಮೌಲ್ಯಮಾಪನವೂ ಆಗಬೇಕಾಗಿದೆ. ಈ ಕಾರ್ಯಗಳು ಬಹಳ ಅಗಾಧವಾಗಿರುವುದರಿಂದ ಒಂದೇ ಸಲಕ್ಕೆ ಇವುಗಳನ್ನು ತೆಗೆದುಕೊಳ್ಳದೆ ಹಂತ ಹಂತವಾಗಿ ಈ ಯೋಜನೆಗಳ ಉಪಯುಕ್ತತೆಯ ಮೌಲ್ಯಮಾಪನವನ್ನು ಗ್ರಾಮೀಣ ಮಟ್ಟದಲ್ಲಿಯೇ ಮಾಡಬೇಕಾಗುತ್ತದೆ. ಇದಕ್ಕಾಗಿ ಸಮಗ್ರವಾದ ಒಂದು ಸೂಕ್ತ ವ್ಯವಸ್ಥೆ ಇರಬೇಕಾಗುತ್ತದೆ. ಇದರ ಜೊತೆ ಮಹಿಳೆಯರ ನಿತ್ಯ ಜೀವನವನ್ನು ಸುಧಾರಿಸಲು, ಅವರ ಹಕ್ಕುಗಳನ್ನು ಪ್ರಭಾವಶಾಲಿಯಾಗಿ ಸ್ಥಿರೀಕರಿಸಲು ಹಾಗೂ ಅವರು ಪ್ರಜಾಪ್ರಭುತ್ವ ಪ್ರಕ್ರಿಯೆಯಲ್ಲಿ ಸತ್ವಶಾಲಿಯಾಗಿ ಭಾಗವಹಿಸಲು ನೆರವಾಗುವಂತಹ ವಾತಾವರಣವನ್ನುಂಟು ಮಾಡಬೇಕು. ಈ ಚಿಂತನೆಗಳಿಗೆ ಅನುಗುಣವಾಗಿ, ಮೇಲೆ ಹೇಳಿದ ಪ್ರತಿ ವಿಭಾಗದಲ್ಲಿ ಮಾಡಿರುವ ಪ್ರತ್ಯೇಕ ಸಲಹೆಗಳನ್ನಲ್ಲದೆ, ಈ ಕೆಳಕಂಡ ಪ್ರಮುಖ ಸಲಹೆಗಳನ್ನು ಮಾಡಲಾಗಿದ್ದು ಸರ್ಕಾರ ಈ ಬಗ್ಗೆ ಅತಿ ಶೀಘ್ರವಾಗಿ ಗಮನ ಹರಿಸಿ ಅನುಷ್ಠಾನಗೊಳಿಸಬೇಕಾಗಿ ಕ್ರಿಯಾ ಸಮಿತಿಯು ಆಗ್ರಹ ಪಡಿಸುತ್ತದೆ.

1. **ಮಹಿಳಾ ಅಭಿವೃದ್ಧಿಯನ್ನು ತ್ವರಿತಗೊಳಿಸುವುದಕ್ಕೆ ಪೂರಕವಾಗಿ ಸರ್ಕಾರ ಮತ್ತು ಸರ್ಕಾರೇತರ ಎಲ್ಲಾ ಪ್ರಯತ್ನಗಳಿಗೆ ಸಹಾಯಕವಾಗುವಂತೆ, ಈ ಪ್ರಯತ್ನಗಳನ್ನು ಸಮನ್ವಯಗೊಳಿಸುವ ಸಲುವಾಗಿ ಮತ್ತು ಈ ಪ್ರಯತ್ನಗಳ ವತಿಯಿಂದ ಮಹಿಳಾ ಅಭಿವೃದ್ಧಿಯಲ್ಲಿ ಉಂಟಾಗುವ ಫಲವನ್ನು ಮೌಲ್ಯಮಾಪನ ಮಾಡುವ ದೃಷ್ಟಿಯಿಂದ ಮಹಿಳಾ ಅಭಿವೃದ್ಧಿ ನಿಗಮದಲ್ಲಿರುವ "ರಾಜ್ಯ ಮಹಿಳಾ ಸಶಕ್ತೀಕರಣ ಸಂಪನ್ಮೂಲ ಕೇಂದ್ರ" (State Resource Centre for Women Empowerment)ವನ್ನು ವಿಸ್ತರಿಸಿ ಅದಕ್ಕೆ ಸೂಕ್ತವಾದ ಹೆಚ್ಚಿನ ಆರ್ಥಿಕ ಸಹಾಯವನ್ನು ಸರ್ಕಾರ ನೀಡಬೇಕು. ಈ ನವೀಕೃತ ಸಂಪನ್ಮೂಲ ಕೇಂದ್ರವು ಮಹಿಳಾ ಅಭಿವೃದ್ಧಿಗೆ ಸಂಬಂಧಪಟ್ಟ ನೀತಿ ಮತ್ತು ಯೋಜನೆಗಳಿಗೆ ಒತ್ತು ಕೊಡುವ ರೂಪರೇಷೆಯನ್ನು ಹಾಗೂ ಕಾರ್ಯ ವಿಸ್ತಾರವನ್ನು ನಿಗದಿ ಪಡಿಸುವ ಸಲುವಾಗಿ ಮಹಿಳಾ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಕಾಳಜಿ ಮತ್ತು ಅನುಭವವಿರುವ ಸರ್ಕಾರಿ ಮತ್ತು ಸರ್ಕಾರೇತರ ಪ್ರತಿನಿಧಿಗಳ ಚಿಕ್ಕ ತಂಡವೊಂದನ್ನು ರಚಿಸಿ "ರಾಜ್ಯ ಮಹಿಳಾ ಸಶಕ್ತೀಕರಣ ಸಂಪನ್ಮೂಲ" ಕೇಂದ್ರವು ತ್ವರಿತವಾಗಿ ವಿಸ್ತೃತ ಕಾರ್ಯವನ್ನು ಅನುಷ್ಠಾನಗೊಳಿಸುವ ಸಲುವಾಗಿ ಬಲವರ್ಧನೆ ಮಾಡಬೇಕು.**

2. **ಗುಡಿ ಕೈಗಾರಿಕೆ, ಸ್ವಯಂ ಉದ್ಯೋಗ ಮುಂತಾದವುಗಳಿಂದ ಮಹಿಳೆಯರು ಉತ್ಪಾದಿಸುವ ವಸ್ತುಗಳಿಗೆ ಸರಿಯಾದ ಮಾರುಕಟ್ಟೆ ದೊರೆಯಬೇಕು. ಇದಕ್ಕೆ ಸರ್ಕಾರ, ಸಹಕಾರಿ ಸಂಘಟನೆಗಳ ಮತ್ತು ಸ್ವಯಂ ಸೇವಾ ಸಂಸ್ಥೆಗಳ ಜಾಲವೊಂದನ್ನು ಪ್ರತಿ ಜಿಲ್ಲೆಯ ಹಂತದಲ್ಲೂ ಅಭಿವೃದ್ಧಿ ಪಡಿಸಬೇಕು. ಈ ಜಾಲವನ್ನು ನಿರ್ಮಿಸುವ ಹೊಣೆಯನ್ನು ಜಿಲ್ಲೆಯ ಪ್ರಮುಖ ಸ್ವಯಂ ಸೇವಾ ಸಂಸ್ಥೆಯೊಂದಕ್ಕೆ ವಹಿಸಬೇಕು. ಇದಕ್ಕೆ ಪೂರಕವಾಗಿ ರಾಜ್ಯ ಮಟ್ಟದ ಮಹಿಳಾ ಒಕ್ಕೂಟ (State Levl Women Federation)ವನ್ನು ಪ್ರಾರಂಭಿಸಲು ರಾಜ್ಯ ಸರ್ಕಾರವು ತ್ವರಿತವಾಗಿ ಸೂಕ್ತ ಕ್ರಮ ತೆಗೆದುಕೊಳ್ಳಬೇಕು.**

3. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯೂ ಸೇರಿದಂತೆ ಸರ್ಕಾರದ ಒಟ್ಟು ಇಪ್ಪತ್ತಾರು ಇಲಾಖೆಗಳು ಮಹಿಳಾ ಅಭಿವೃದ್ಧಿಗಾಗಿ ವಿವಿಧ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿರುವುದರಿಂದ, ಈ ಎಲ್ಲಾ ಪ್ರಯತ್ನಗಳನ್ನು ಸಮನ್ವಯಗೊಳಿಸುವ ದೃಷ್ಟಿಯಿಂದ ಎಲ್ಲಾ ಇಲಾಖೆಗಳ ಪ್ರತಿನಿಧಿಗಳನ್ನೊಳಗೊಂಡ ಒಂದು ಸಂಯುಕ್ತ ಸಮಿತಿಯನ್ನು (Inter Departmental Standing Committee for Developmet of Women) ರಚಿಸಲು ಶೀಘ್ರದಲ್ಲಿಯೇ ಆದೇಶ ನೀಡಿ ಪ್ರತಿ ಗ್ರಾಮ ಮಟ್ಟದಲ್ಲೂ ಮಹಿಳೆಯರಿಗೆ ಕೃಷಿ, ಪಶು ಪಾಲನೆ, ತೋಟಗಾರಿಕೆ, ಶಿಕ್ಷಣ, ಆರೋಗ್ಯ, ಉದ್ಯೋಗವಕಾಶ, ಸಹಕಾರ, ಕಾನೂನು ಮುಂತಾದ ಮಹಿಳೆಯರ ವಿಷಯಗಳಿಗೆ ಸಂಬಂಧಪಟ್ಟಂತೆ ಸಮನ್ವಿತ ಸೇವಾ (Package of Servics) ಸೌಲಭ್ಯಗಳನ್ನು ಒದಗಿಸಿದರೆ ರಾಜ್ಯದಲ್ಲಿ ಮಹಿಳಾ ಅಭಿವೃದ್ಧಿಯ ದಿಸೆಯಲ್ಲಿ ಒಂದು ಮೈಲಿಗಲ್ಲಾಗುತ್ತದೆ.

4. ಆಸ್ತಿ-ಪಾಸ್ತಿ, ಹಿಂಸಾಚಾರ ಮತ್ತು ದೌರ್ಜನ್ಯ, ವಿವಾಹ, ಉದ್ಯೋಗ, ಶಿಕ್ಷಣ, ಆರೋಗ್ಯ ಮತ್ತು ರಾಜಕೀಯ ಮುಂತಾದ ವಿಷಯಗಳಿಗೆ ಸಂಬಂಧಪಟ್ಟಂತೆ ಕಾನೂನು ಬದ್ಧವಾಗಿ ಮಹಿಳೆಯರಿಗೆ ಮತ್ತು ಹೆಣ್ಣು ಮಕ್ಕಳಿಗೆ ಎಲ್ಲಾ ಸೌಲಭ್ಯ ಮತ್ತು ಪರಿಹಾರಗಳ ಬಗ್ಗೆ ರಾಜ್ಯದಲ್ಲಿರುವ ಎಲ್ಲಾ ಕಾನೂನುಗಳ ಕ್ರೋಢೀಕರಣವಾಗಿ (Codification) ಒಂದು ಸಮಗ್ರವಾದ ಪ್ರಕಟಣೆಯನ್ನು ರಾಜ್ಯ ಸರ್ಕಾರವು ಸಂಬಂಧಪಟ್ಟ ಎಲ್ಲಾ ಸರ್ಕಾರ ಮತ್ತು ಸರ್ಕಾರೇತರ ಸಂಘ-ಸಂಸ್ಥೆಗಳಿಗೆ ಇವುಗಳ ಪ್ರತಿಯನ್ನು ಒದಗಿಸಿಕೊಡಬೇಕು.

5. ಕರ್ನಾಟಕ ರಾಜ್ಯದಲ್ಲಿ ರಾಜಕೀಯದಲ್ಲಿ ಮಹಿಳೆಯರ ನಾಯಕತ್ವವನ್ನು ಬೆಳೆಸಿ, ಅವರನ್ನು ನಿರ್ಧಾರಯುತ ವೇದಿಕೆಗಳಲ್ಲಿ ಪ್ರಬಲಗೊಳಿಸುವ ಸಲುವಾಗಿ "ಕರ್ನಾಟಕ ಮಹಿಳಾ ರಾಜಕೀಯ ಕೇಂದ್ರ" (Karkanata Centre for Women in Politics)ವೊಂದನ್ನು ರಾಜ್ಯ ಸರ್ಕಾರವು ಸ್ಥಾಪಿಸಿ, ಯುವ ರಾಜಕೀಯ ಮಹಿಳೆಯರ ಸೂಕ್ತ ತರಬೇತಿ ನೀಡುವುದಲ್ಲದೇ ಗ್ರಾಮ ಪಂಚಾಯಿತಿ ಮಟ್ಟದಿಂದ ರಾಜ್ಯ ವಿಧಾನ ಸಭೆ/ವಿಧಾನ ಪರಿಷತ್ ಮಟ್ಟದವರೆಗಿನ ಎಲ್ಲಾ ಚುನಾಯಿತ ಸದಸ್ಯರಿಗೂ ಸೂಕ್ತ ತರಬೇತಿ ನೀಡುವ ಜವಾಬ್ದಾರಿಯನ್ನು ಈ ಕೇಂದ್ರಕ್ಕೆ ವಹಿಸಬೇಕು.

# 1. ಮಹಿಳಾ ಶಿಕ್ಷಣ ಹಾಗೂ ಸಾಕ್ಷರತೆ

ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಪ್ರತ್ಯೇಕ ಕ್ರಿಯಾ ಯೋಜನಾ ಸಮಿತಿಯೊಂದನ್ನು ಕರ್ನಾಟಕ ಸರ್ಕಾರ ರಚಿಸಿದ್ದು ಈ ಸಮಿತಿಯು ಪ್ರತ್ಯೇಕವಾಗಿ ಮಹಿಳಾ ಶಿಕ್ಷಣದ ಬಗ್ಗೆಯೂ ಪರಿಶೀಲನೆ ನಡೆಸುತ್ತಿರುವುದರಿಂದ ಮಹಿಳಾ ಕ್ರಿಯಾ ಯೋಜನಾ ಸಮಿತಿಯು ಈ ಬಗ್ಗೆ ಸಂಕ್ಷಿಪ್ತವಾಗಿ ಚರ್ಚಿಸಿದೆ ಹಾಗೂ ಈ ಸಮಿತಿಯು ಮಾಡಿರುವ ಕೆಲವು ಸಲಹೆಗಳನ್ನು ಮಹಿಳಾ ಅಭಿವೃದ್ಧಿಯ ದೃಷ್ಟಿಯಿಂದ ಪುನರ್ ಉಚ್ಚರಿಸಲಾಗಿದೆ.

ಸಾಮಾಜಿಕ ಪರಿವರ್ತನೆಯಲ್ಲಿ ಮತ್ತು ರಾಷ್ಟ್ರೀಯ ಅಭಿವೃದ್ಧಿಯಲ್ಲಿ ಶಿಕ್ಷಣವು ವಹಿಸುವ ಮಹತ್ವದ ಪಾತ್ರ ಸರ್ವವಿದಿತ. ಅದರಲ್ಲೂ ಸ್ತ್ರೀ ಶಿಕ್ಷಣವು, ಕುಟುಂಬದ, ರಾಜ್ಯದ ಮತ್ತು ರಾಷ್ಟ್ರದ ಅಭಿವೃದ್ಧಿಯ ಒಂದು ಬುನಾದಿ. ರಾಷ್ಟ್ರದ ಆರೋಗ್ಯ, ಕೃಷಿ, ಸಾಂಸ್ಕೃತಿಕ ಪ್ರಗತಿ, ಜನಸಂಖ್ಯಾ ಕಾರ್ಯಕ್ರಮ ಮುಂತಾದ ವಿಷಯಗಳಲ್ಲಿ ಮಹಿಳೆಯರು ಶಿಕ್ಷಿತರಾಗುವವರೆಗೆ ಪೂರ್ಣ ಅಭಿವೃದ್ಧಿ ಸಾಧ್ಯವಿಲ್ಲವೆಂಬುದನ್ನು ಅನೇಕ ಅಂತರರಾಷ್ಟ್ರೀಯ ಹಾಗೂ ರಾಷ್ಟ್ರೀಯ ವೇದಿಕೆಗಳು ಪುನಃ ಪುನಃ ವಿಶದ ಪಡಿಸುತ್ತಿವೆ. ಭಾರತ ಈ ಅಭಿಪ್ರಾಯಕ್ಕೆ ಅಂತರರಾಷ್ಟ್ರೀಯ ಮಟ್ಟದಲ್ಲಿ ತನ್ನ ಅನುಮೋದನೆ ನೀಡಿ ಮಹಿಳೆಯರನ್ನು ಅಭಿವೃದ್ಧಿಯ ಕ್ರಿಯೆಯಲ್ಲಿ ಪಾಲುದಾರರನ್ನಾಗಿ ಮಾಡುವುದಲ್ಲದೆ ರಾಷ್ಟ್ರದ ಆಗುಹೋಗುಗಳಲ್ಲಿ ಮಹಿಳಾ ಸಶಕ್ತೀಕರಣದ ಮಹತ್ವವನ್ನು ಪ್ರತಿಪಾದಿಸಿದೆ.

1991ರ ಜನಗಣತಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಮಹಿಳೆಯರ ಸಾಕ್ಷರತಾ ದರ ಶೇಕಡ 44.3 ಮತ್ತು ಪುರುಷರ ಸಾಕ್ಷರತಾ ದರ 67.3 ಇದ್ದು, ಸಾಕ್ಷರತಾ ದರದಲ್ಲಿ ಇರುವ ಲಿಂಗ ಅಸಮಾನತೆಯನ್ನು ತೋರಿಸುತ್ತದೆ. ರಾಜ್ಯದ ಒಟ್ಟು 2,20,25,284 (1991) ಮಹಿಳೆಯರಲ್ಲಿ 1,38,83,719 ಮಹಿಳೆಯರು ಅನಕ್ಷರಸ್ತ ಮಹಿಳೆಯರಿರುವುದು ಸಮಸ್ಯೆಯ ಅಗಾಧತೆಯನ್ನು ತೋರಿಸುತ್ತದೆ. ರಾಜ್ಯದಲ್ಲಿ ಸಾಕ್ಷರತಾ ಅಭಿವೃದ್ಧಿಗಾಗಿ ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದರ ಕಾರಣದಿಂದ 1961 ರಿಂದ 1996ರ ವರೆಗೆ ಮಹಿಳಾ ಸಾಕ್ಷರತೆ ಶೇ 29.80 ರಿಂದ ಶೇ 63.42 ಏರಿರುವುದು ಹಾಗೂ ಇದೇ ಅವಧಿಯಲ್ಲಿ ಪುರುಷ ಸಾಕ್ಷರತಾ ದರದ ಬೆಳವಣಿಗೆ ಶೇ 74.39 ಮತ್ತು ಮಹಿಳಾ ಸಾಕ್ಷರತಾ ದರದ ಬೆಳವಣಿಗೆ ಶೇ 215.27 (ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ - 1999 ಪುಟ 261-262) ಇದ್ದದ್ದು ಮೇಲ್ನೋಟಕ್ಕೆ ಹೆಮ್ಮೆ ಪಡುವಂತಿದ್ದರೂ ಸಹ, ಜಿಲ್ಲಾವಾರು ಅಂಕಿ ಅಂಶಗಳ ಒಳ ಹೊಕ್ಕು ನೋಡಿದಾಗ ಮಹಿಳಾ ಸಾಕ್ಷರತೆ ಕುರಿತಂತೆ ಶೋಚನೀಯ ಪರಿಸ್ಥಿತಿ ಗೋಚರವಾಗುತ್ತದೆ.

1961ರಲ್ಲಿ ರಾಜ್ಯದಲ್ಲಿ ಮಹಿಳಾ ಸಾಕ್ಷರತಾ ದರ ಶೇ 16.70 ಇದ್ದದ್ದು 1996ರಲ್ಲಿ ಶೇ 52.65ಕ್ಕೆ ಏರಿದೆ. ಆದರೆ ಹೆಚ್ಚಿನ ಜಿಲ್ಲೆಗಳಲ್ಲಿ ಮಹಿಳಾ ಸಾಕ್ಷರತೆ ರಾಜ್ಯದ ಸರಾಸರಿ ಮಹಿಳಾ ಸಾಕ್ಷರತಾ ದರ (52.65)ಕ್ಕೂ ಕಡಿಮೆ ಇದ್ದದ್ದು ಈ ಕೆಳಗಿನ ಪಟ್ಟಿಯಿಂದ ವಿದಿತವಾಗುತ್ತದೆ.

| ಮಹಿಳಾ ಸಾಕ್ಷರತಾ ದರ (ಶೇಕಡ ದರ) | ಜಿಲ್ಲೆಗಳ ಸಂಖ್ಯೆ |
|---|---|
| 52.65ಕ್ಕೂ ಮೇಲ್ಪಟ್ಟು | 8 |
| 52.65ಕ್ಕೂ ಕಡಿಮೆ | 12 |
| **ಒಟ್ಟು** | **20** |

1997ರಲ್ಲಿ ಆದ ಹೊಸ ಜಿಲ್ಲೆಗಳ ಘಟನೆಯನ್ನು ಗಮನಕ್ಕೆ ತೆಗೆದುಕೊಳ್ಳಲಾಗಿಲ್ಲ.

ಹನ್ನೆರಡು ಜಿಲ್ಲೆಗಳು (ಬೆಂಗಳೂರು ಗ್ರಾಮಾಂತರ, ಬೆಳಗಾವಿ, ಬಳ್ಳಾರಿ, ಬೀದರ್, ಧಾರವಾಡ, ಗುಲಬರ್ಗಾ, ಚಿತ್ರದುರ್ಗ, ಕೋಲಾರ, ಮಂಡ್ಯ, ತುಮಕೂರು, ಮೈಸೂರು, ರಾಯಚೂರು) ಶೇ 52.65 ಕ್ಕಾ ಕಡಿಮೆ ಮಹಿಳಾ ಸಾಕ್ಷರತಾ ಹೊಂದಿರುವುದು, ವ್ಯವಸಾಯದಲ್ಲಿ ಪ್ರಗತಿಪರ ಜಿಲ್ಲೆಗಳಾದ ಮಂಡ್ಯ (46.92) ಮತ್ತು ಮೈಸೂರು (46.04)ಗಳಲ್ಲೂ ಮಹಿಳಾ ಸಾಕ್ಷರತೆಯಲ್ಲಿ ಸಾಕಷ್ಟು ಪ್ರಗತಿ ಆಗದಿರುವುದು, ಬಳ್ಳಾರಿ (38.10) ಗುಲಬರ್ಗಾ(30.91) ಮತ್ತು ರಾಯಚೂರು (26.47) ಜಿಲ್ಲೆಗಳಲ್ಲಿ ಮಹಿಳಾ ಸಾಕ್ಷರತಾ ಪ್ರಮಾಣ ನಿರೀಕ್ಷಿಸಿದ ಮಟ್ಟಕ್ಕಿಂತ ಹಾಗೂ ರಾಜ್ಯದ ಇತರ ಜಿಲ್ಲೆಗಳಿಗಿಂತ ಅತ್ಯಂತ ಕಡಿಮೆ ಇರುವುದು ಕಳವಳಕ್ಕೆ ಕಾರಣವಾಗಿದೆ.

ಜಿಲ್ಲೆಗಳ ಪುನರ್ಘಟನೆಯ ನಂತರದ ವರದಿಯೊಂದರ ಪ್ರಕಾರ ರಾಜ್ಯದ ಏಳು ಜಿಲ್ಲೆಗಳು (ರಾಯಚೂರು, ಕೊಪ್ಪಳ, ಚಾಮರಾಜನಗರ, ಬೀದರ್, ಬಳ್ಳಾರಿ, ಮಂಡ್ಯ ಮತ್ತು ಮೈಸೂರು) ಸಾಕ್ಷರತಾ ಪ್ರಮಾಣದಲ್ಲಿ ಹಿಂದುಳಿದಿದೆ ಎಂಬುದು ರಾಜ್ಯದ ಯೋಜನಾ ಆಯೋಗದ ಮೂಲಗಳು ತಿಳಿಸಿವೆ. (ಅನುಬಂಧ-7)

ಸಾರ್ವಜನಿಕ ಶಿಕ್ಷಣ ಇಲಾಖೆಯ ಒಂದು ವರದಿಯಂತೆ 1 ರಿಂದ 4ನೇ ತರಗತಿಯವರೆಗೆ ಶಾಲೆಯನ್ನು ಬಿಟ್ಟ ಬಾಲಕಿಯರ ಸಂಖ್ಯೆ 1990-91 ರಲ್ಲಿ ಶೇಕಡ 35.80 ಇದ್ದದ್ದು 1999-2000ದ ಹೊತ್ತಿಗೆ ಶೇಕಡ 11.55ಕ್ಕೆ ಮತ್ತು 1 ರಿಂದ 7ನೇ ತರಗತಿಯ ವರೆಗೆ ಶಾಲೆಯನ್ನು ಬಿಟ್ಟ ಬಾಲಕಿಯರ ಸಂಖ್ಯೆ 1990-91 ರಲ್ಲಿ 58-25 ರಿಂದ 1995-2000ದ ಹೊತ್ತಿಗೆ 37.54ಕ್ಕೆ ಇಳಿದಿದ್ದು ಸಂತೋಷದಾಯಕವಾದ ವಿಷಯ. ಹೀಗಿದ್ದರೂ, ಇದರಿಂದ ಶಾಲೆ ಬಿಡುವ ಬಾಲಕಿಯರ ಸಂಖ್ಯೆ ಇನ್ನೂ ಎಷ್ಟು ಹೆಚ್ಚಿದೆ ಎಂಬುದು ಸ್ಪಷ್ಟವಾಗುತ್ತದೆ.

ಹೆಚ್ಚಿನ ಹೆಣ್ಣು ಮಕ್ಕಳು ಶಾಲೆಯ ನಂತರ ನಮ್ಮ ಶಿಕ್ಷಣವನ್ನು ಮುಂದುವರಿಸದೆ ಇರುವುದರಿಂದ ಪ್ರೌಢಶಾಲಾ ಹಂತದಲ್ಲಿ ಶಿಕ್ಷಣವನ್ನು ವೃತ್ತಿಪರ ಶಿಕ್ಷಣವನ್ನಾಗಿ ಮಾಡಿದರೆ, ಹೆಚ್ಚಿನ ಹೆಣ್ಣು ಮಕ್ಕಳಿಗೆ ಅನುಕೂಲವಿದ್ದರೆ ತಮ್ಮ ಶಿಕ್ಷಣವನ್ನು ಮುಂದುವರಿಸಲು ಅಥವಾ ಶಿಕ್ಷಣವನ್ನು ಮುಂದುವರಿಸಲು ಅನುಕೂಲವಿಲ್ಲದಿದ್ದರೆ ಸೂಕ್ತವಾದ ಉದ್ಯೋಗವನ್ನು ಅರಸಲು ಸಹಾಯಕವಾಗುತ್ತದೆ. ಪ್ರೌಢ ಶಾಲಾ ಮಟ್ಟದಲ್ಲಿ ವೃತ್ತಿಪರ ಶಿಕ್ಷಣವನ್ನು ಪ್ರಾರಂಭಿಸಲು ಭಾರತ ಸರ್ಕಾರದ ಯೋಜನೆಯನ್ನು (Scheme of Vocationalisation of Secondary Education) ಅನುಷ್ಠಾನಗೊಳಿಸುವುದು ಮಹತ್ವ ಪೂರ್ಣವೆನಿಸುತ್ತದೆ. ಈ ಯೋಜನೆ ಅನ್ವಯ ಹಣಕಾಸಿನ ಹೆಚ್ಚಿನ ಭಾರವನ್ನು ಕೇಂದ್ರ ಸರ್ಕಾರ ವಹಿಸುತ್ತದೆ.

1994ರಲ್ಲಿ ಕರ್ನಾಟಕದಲ್ಲಿ ವನಜರವರು ಮಾಡಿದ ಒಂದು ಅಧ್ಯಯನದ ಪ್ರಕಾರ (National Profile on Woman Health and Development, India P. 114) ವಯಸ್ಕರ ಶಿಕ್ಷಣದಲ್ಲಿ 50 ವರ್ಷದ ಅನುಭವ ಹೊಂದಿರುವ ಕರ್ನಾಟಕದ ಮೂಲ ಪುಸ್ತಕಗಳಲ್ಲಿ ಮಹಿಳೆಯರನ್ನು ನಿಷ್ಕ್ರಿಯರು, ಮಹಿಳೆ ಒಂದು ವಸ್ತು, ಮಕ್ಕಳು ಆಗದಿರುವುದಕ್ಕೆ ಮತ್ತು ಹೆಚ್ಚು ಮಕ್ಕಳು ಆಗುವುದಕ್ಕೆ ನಿಂದನೆ ಮುಂತಾದ ವಿಷಯಗಳು ಸೇರಿರುವುದು ಕಂಡು ಬಂದಿದೆ. ಇದೇ ರೀತಿ ಶಾಲಾ ಶಿಕ್ಷಣದಲ್ಲಿ ಲಿಂಗಭೇಧದ ಸಾಂಪ್ರಾದಾಯಿಕ ಮನೋಧೋರಣೆಯನ್ನು ಪ್ರಬಲಗೊಳಿಸುವ ಅನೇಕ ಪಾಠಗಳು ಹಾಗೂ ಚಿತ್ರಗಳು ಇನ್ನೂ ಇರುವುದು, ಎಲ್ಲಾ ಹಂತಗಳಲ್ಲೂ ಪಠ್ಯ ಪುಸ್ತಕಗಳನ್ನು ಪುನರ್ವಿಮರ್ಶಿಸುವ ಅವಶ್ಯಕತೆಯನ್ನು ಸೂಚಿಸುತ್ತವೆ.

ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸದಿರಲು ಲಿಂಗಭೇದವು ಪ್ರಮುಖ ಕಾರಣವಾಗಿದ್ದರೆ, ಶಾಲೆಗಳು ಬಹಳ ದೂರದಲ್ಲಿರುವುದು, ಶಾಲೆಗಳಲ್ಲಿ ಮೂಲಭೂತ ಸೌಲಭ್ಯಗಳಾದ ಸರಿಯಾದ ಕಟ್ಟಡ, ಕುಡಿಯುವ ನೀರು, ಎಲ್ಲಕ್ಕಿಂತ ಹೆಚ್ಚಾಗಿ ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶೌಚಾಲಯವಿಲ್ಲದಿರುವುದು ಇತರ ಕಾರಣಗಳಾಗಿವೆ. ಇದರ ಜೊತೆಗೆ ಕಾಲಕ್ಕೆ ಅನುಗುಣವಾಗಿ ಶಿಕ್ಷಕರಿಗೆ ಸೂಕ್ತ ಮರು ತರಬೇತಿ ಇಲ್ಲದಿರುವುದರಿಂದ ಪಾಠ ಮಾಡುವ ಕ್ರಮ ಮಕ್ಕಳಿಗೆ ಆಕರ್ಷಣೀಯವಾಗಿಲ್ಲ. 14 ವರ್ಷದವರೆಗೆ ಶಿಕ್ಷಣ ಖಡ್ಡಾಯವಾಗಿರಬೇಕೆಂಬ ಸಂವಿದಾನದ ಆದೇಶವನ್ನು ಕಟ್ಟು ನಿಟ್ಟಾಗಿ ಅನುಷ್ಠಾನಗೊಳಿಸಿ, ಶಿಕ್ಷಕರು ಮತ್ತು ಪಾಲಕರು ತಮ್ಮ ಜವಾಬ್ದಾರಿಯನ್ನು ಪಾಲಿಸಲು ಸೂಕ್ತ ಕ್ರಮ

ತೆಗೆದುಕೊಳ್ಳಬೇಕು. ಜೊತೆಗೆ ಸರ್ಕಾರಿ ಶಾಲೆಗಳ ಗುಣಮಟ್ಟವನ್ನು ಹೆಚ್ಚಿಸಿ ಉತ್ತಮ ಫಲಿತಾಂಶ ನೀಡುವಂತಾಗಬೇಕು, ಮತ್ತು ಸ್ಥಳೀಯ ಪರಿಸ್ಥಿತಿಗೆ ಅನುಗುಣವಾಗಿ ಶಾಲೆಯ ಸಮಯವನ್ನು ಬದಲಾಯಿಸಿದರೆ ಹಾಗೂ ರಾಜ್ಯ ಸರ್ಕಾರವು ಪ್ರಭಾವಯುತವಾಗಿ ನಡೆಸುತ್ತಿರುವ ಶ್ರೀ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಸಂಖ್ಯೆಯನ್ನು ವಿಸ್ತರಿಸಿದರೆ ಹೆಚ್ಚಿನ ಹೆಣ್ಣು ಮಕ್ಕಳಿಗೆ ಶಿಕ್ಷಣ ಮುಂದುವರಿಸಲು ಅನುಕೂಲವಾಗುತ್ತದೆ.

1986ರಲ್ಲಿ ಅನುಮೋದಿಸಲ್ಪಟ್ಟ ಶಿಕ್ಷಣಕ್ಕೆ ಸಂಬಂಧಪಟ್ಟ ರಾಷ್ಟ್ರೀಯ ನೀತಿ (National Policy on Education, 1986) ಯ ಪ್ರಕಾರ ಮಹಿಳೆಯರ ಅಂತಸ್ತು ಬದಲಾಗಬೇಕಾದರೆ ಶಿಕ್ಷಣವು ಒಂದು ಪ್ರಮುಖ ಸಾಧನವಾಗಬೇಕು ಮತ್ತು ಮಹಿಳೆಯರ ಸಂಘಟನೆಯನ್ನು ಸಮಾಜದಲ್ಲಿ ಮಹಿಳೆಯರ ಬಗ್ಗೆ ತಿಳುವಳಿಕೆ ಮೂಡಿಸಲು ಹಾಗೂ ಮಹಿಳೆಯರು ಸಾಮೂಹಿಕ ನಿರ್ಧಾರಗಳನ್ನು ಕೈಗೊಳ್ಳಲು ಸಶಕ್ತರನ್ನಾಗಿ ಮಾಡುವುದು ಪ್ರಮುಖ ಗುರಿಯಾಗಿದೆ. ಕರ್ನಾಟಕ ರಾಜ್ಯ ಸರ್ಕಾರವು ಸಹ ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ (District Primary Education Programme) ವನ್ನು 1994-95ರಲ್ಲಿ ನಾಲ್ಕು ಜಿಲ್ಲೆಗಳಲ್ಲಿ (ಬೆಳಗಾವಿ, ಕೋಲಾರ, ಮಂಡ್ಯ, ರಾಯಚೂರು) ಪ್ರಾರಂಭಿಸಿ ಈಗ ಇನ್ನೂ ಏಳು ಜಿಲ್ಲೆಗಳಿಗೆ (ಬೆಂಗಳೂರು ಗ್ರಾಮಾಂತರ, ಬಳ್ಳಾರಿ, ಬೀದರ್, ಬಿಜಾಪುರ, ಧಾರವಾಡ, ಗುಲ್ಬರ್ಗಾ ಮತ್ತು ಮೈಸೂರು) ವಿಸ್ತರಿಸಿ ಹಾಗೂ ಈ ಜಿಲ್ಲೆಗಳು ಅಧಿಕ ಶಿಶು ಮರಣ ದರ, ಹೆಚ್ಚು ಪ್ರತಿಕೂಲ ಲಿಂಗ ಅನುಪಾತ ಮತ್ತು ಅತ್ಯಂತ ಕಡಿಮೆ ತಲಾ ಆದಾಯಗಳನ್ನು ಹೊಂದಿವೆ. ಈ ಕಾರ್ಯಕ್ರಮದ ಉಪಯುಕ್ತತೆಯನ್ನು ಪರಿಗಣಿಸಿ, ಎಲ್ಲಾ ಜಿಲ್ಲೆಗಳಿಗೂ ಈ.ಕಾರ್ಯಕ್ರಮವನ್ನು ವಿಸ್ತರಿಸಿದರೆ, ರಾಜ್ಯದಲ್ಲಿರುವ ಬಾಲಕಿಯರ ಅನಕ್ಷರತಾ ದರ ಶೀಘ್ರವಾಗಿ ಕಡಿಮೆಯಾಗುತ್ತದೆ.

ಪ್ರಾಥಮಿಕ ಶಾಲಾ ಶಿಕ್ಷಣದ ಜೊತೆ ಜೊತೆಯಾಗಿಯೆ ಶಿಶು ಶಿಕ್ಷಣದ ಅನುಷ್ಠಾನವು ಪ್ರಭಾವಶಾಲಿಯಾದರೆ ಮಕ್ಕಳ ಸರ್ವತೋಮುಖ ಬೆಳವಣಿಗೆ ಆಗುವುದರ ಜೊತೆಗೆ ಪ್ರಾಥಮಿಕ ಶಾಲಾ ಶಿಕ್ಷಣಕ್ಕೆ ಅವರು ಸನ್ನದ್ಧರಾಗಿ ಬರುತ್ತಾರೆ. ಮಕ್ಕಳ ಮಾನಸಿಕ ಬೆಳವಣಿಗೆಗೆ ಪೂರಕವಾಗಿ ಸೂಕ್ತವಾದ ಆಟದ ಸಾಮಾನುಗಳನ್ನು, ಆಟ-ಪಾಠಗಳನ್ನು, ನೃತ್ಯ-ಸಂಗೀತಗಳನ್ನು ಶಿಶು ಶಿಕ್ಷಣದ ಅವಿಭಾಜ್ಯ ಭಾಗಗಳನ್ನಾಗಿ ಮಾಡುವುದು ಉಚಿತ. ಶಿಶು ಶಿಕ್ಷಣಕ್ಕೆ ಸೂಕ್ತವಾದ ಜಾಗ, ಪೌಷ್ಟಿಕ ಆಹಾರದ ವ್ಯವಸ್ಥೆಗಳನ್ನು ಅಭಿವೃದ್ಧಿಗೊಳಿಸುವ ಜೊತೆ ಜೊತೆಯಾಗಿ ಕಾರ್ಯಕರ್ತರ ಸಂಭಾವನೆಯನ್ನು ಹೆಚ್ಚಿಸಬೇಕು. ಅದರಲ್ಲೂ ಆಟದ ಸಾಮಾನುಗಳನ್ನು ನೀಡುವಾಗ, ಚಿತ್ರಗಳನ್ನು ಬರೆಸುವಾಗ, ಹಾಡುಗಳನ್ನು ಹೇಳಿಸುವಾಗ ಮುಂತಾದ ಪ್ರತಿ ಚಟುವಟಿಕೆಗಳಲ್ಲೂ ಲಿಂಗ ಸಮಾನತೆಯ ಅಭಿಪ್ರಾಯಗಳನ್ನು ಮೂಡಿಸುವಂತಿರಬೇಕು.

**ಸಲಹೆಗಳು:**

1. ರಾಜ್ಯದ ಎಲ್ಲಾ ಜಿಲ್ಲೆಗಳಲ್ಲೂ ಬಾಲಕಿಯರ ಹಾಗೂ ಮಹಿಳಾ ಸಾಕ್ಷರತಾ ಕಾರ್ಯಕ್ರಮಗಳನ್ನು, ಅದರಲ್ಲೂ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿಯ ಮಹಿಳಾ ಸಾಕ್ಷರತೆಯ ಕಾರ್ಯಕ್ರಮಗಳನ್ನು ಚುರುಕುಗೊಳಿಸುವ ಸಲುವಾಗಿ ಮಹಿಳಾ ಸಾಕ್ಷರತಾ ಆಂದೋಲನಕ್ಕೆ ಪೂರಕವಾಗಿದ್ದ ಪ್ರಚಾರ ಕಾರ್ಯಕ್ರಮವನ್ನು ಪುನಃ ತ್ವರಿತವಾಗಿ ಪ್ರಭಾವಶಾಲಿಯನ್ನಾಗಿ ಮಾಡುವುದಲ್ಲದೆ ಪಠ್ಯಕ್ರಮಗಳಲ್ಲಿ ಜೀವನ ಅನುಗುಣವಾಗಿ ಹಾಗೂ ಹೆಣ್ಣು ಮಕ್ಕಳಲ್ಲಿ ಆತ್ಮ ವಿಶ್ವಾಸ ಬೆಳೆಸುವಂತಹ, ಮಹಿಳೆಯರ ಹಕ್ಕುಗಳ ಮತ್ತು ಸಮಾನತೆಯ ಬಗ್ಗೆ ಪಠ್ಯ ಕ್ರಮದಲ್ಲಿ ವಿಷಯಗಳನ್ನು ಅಳವಡಿಸಬೇಕು. ಇದರ ಜೊತೆಗೆ ಪಠ್ಯ ಪುಸ್ತಕಗಳಲ್ಲಿರುವ ಚಿತ್ರಗಳಲ್ಲೂ ಲಿಂಗ ಸಮಾನತೆಯನ್ನು ಪ್ರತಿಬಿಂಬಿಸುವಂತೆ ಮಕ್ಕಳಲ್ಲಿ ಲಿಂಗ ಭೇದ ಇರದಂತಹ ಭಾವನೆ ಬೆಳೆಯಲು ಪೂರಕವಾಗಿರಬೇಕು. ಪಠ್ಯ ಪುಸ್ತಕಗಳ ಸಮಿತಿಯಲ್ಲಿ ಮಹಿಳೆಯರ ಬಗ್ಗೆ ತೀವ್ರ ಕಳಕಳಿ ಇರುವ ಮಹಿಳೆಯರ ಹಾಗೂ ಮಹಿಳಾ ಲೇಖಕಿಯರ ಪ್ರಾತಿನಿಧ್ಯ ಕನಿಷ್ಠ ಅರ್ಧದಷ್ಟಾದರೂ ಇರಬೇಕು.

2. ಮಹಿಳಾ ಸಾಕ್ಷರತಾ ದರದಲ್ಲಿ ಅತ್ಯಂತ ಹಿಂದುಳಿದ ಏಳು ಜಿಲ್ಲೆಗಳಲ್ಲಿ (ರಾಯಚೂರು, ಕೊಪ್ಪಳ, ಚಾಮರಾಜನಗರ, ಬೀದರ್, ಬಳ್ಳಾರಿ, ಮಂಡ್ಯ ಮತ್ತು ಮೈಸೂರು) ಸ್ಥಳೀಯ ಪರಿಸ್ಥಿತಿಗೆ ಅನುಗುಣವಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನ ಗೊಳಿಸಬೇಕು ಹಾಗೂ 2005ರ ಹೊತ್ತಿಗೆ ಈ ಜಿಲ್ಲೆಗಳಲ್ಲಿ ಮಹಿಳಾ ಸಾಕ್ಷರತಾ ದರವನ್ನು ದ್ವಿಗುಣಗೊಳಿಸಬೇಕು ಮತ್ತು ಪ್ರತಿ ವರ್ಷವು ಪ್ರಗತಿಯ ಪರಿಶೀಲನೆ ಮುಕ್ತ ವಾತಾವರಣದಲ್ಲಿ ಆಗಬೇಕು.

3. ಪ್ರೌಢ ಶಾಲಾ ಮಟ್ಟದ ಶಿಕ್ಷಣವನ್ನು ವೃತ್ತಿ ಪರ ಮಾಡಲು ಉದ್ದೇಶಿಸಿರುವ ಭಾರತ ಸರ್ಕಾರದ ಯೋಜನೆಯನ್ನು ( Scheme of Vocationalisation of Secondary Education) ವಿಸ್ತರಿಸಿ ಸದೃಢಗೊಳಿಸಲು ರಾಜ್ಯ ಸರ್ಕಾರವು ಶಿಕ್ಷಣ ಇಲಾಖೆಗೆ ಆದೇಶ ನೀಡಬೇಕು.

4. ಶಾಲೆಯಿಂದ ವಂಚಿತರಾದ ಹಾಗೂ ಶಾಲೆಯನ್ನು ಬಿಟ್ಟ ಹೆಣ್ಣು ಮಕ್ಕಳಿಗೆ ನಡೆಸುತ್ತಿರುವ ಅನೌಪಚಾರಿಕ ಶಿಕ್ಷಣವನ್ನು (Non Formal Education) ಹೆಚ್ಚು ವಿಸ್ತರಿಸಬೇಕು ಹಾಗೂ ಅವರ ಜೀವನಕ್ಕೆ ನೇರವಾಗಿ ಉಪಯುಕ್ತವಾಗುವಂತೆ ಪುನರ್ ರೂಪಿಸುವ ಸಲುವಾಗಿ ಹಾಗೂ ರಾಜ್ಯ ಸರ್ಕಾರವು ನಡೆಸುತ್ತಿರುವ ಶ್ರೀ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಸಂಖ್ಯೆಗಳಲ್ಲಿ ಮೂರು ಸಾವಿರ ವಿದ್ಯಾರ್ಥಿನಿಯರ ವ್ಯಾಸಂಗಕ್ಕಾಗಿ ಈಗಿರುವ ಅನುಕೂಲವನ್ನು ಕನಿಷ್ಠ ಇನ್ನೂ ಮೂರು ಸಾವಿರ ವಿದ್ಯಾರ್ಥಿನಿಯರಿಗೆ ಅವಕಾಶವಾಗುವಂತೆ ವಿಸ್ತರಿಸಬೇಕು. ಅನೌಪಚಾರಿಕ ಶಿಕ್ಷಣದ ಜವಾಬ್ದಾರಿಯನ್ನು ಗ್ರಾಮ ಪಂಚಾಯಿತಿಗಳಿಗೆ ವಹಿಸಿಕೊಡಬೇಕು.

5. ಪ್ರತಿ ಗ್ರಾಮದಲ್ಲೂ ಇರುವ ಗ್ರಾಮೀಣ ಶಿಕ್ಷಣ ಸಮಿತಿಗಳನ್ನು ಸದೃಢಗೊಳಿಸಬೇಕು. ಈ ಸಮಿತಿಗಳ ಮೂಲಕ ಹೆಣ್ಣು ಮಕ್ಕಳು ಶಾಲೆ ಬಿಡುವ ಪ್ರದೇಶಗಳಲ್ಲಿ ಪೋಷಕರಿಗೆ ತಿಳುವಳಿಕಾ ಶಿಬಿರಗಳನ್ನು ಏರ್ಪಡಿಸುವುದಲ್ಲದೆ ಶಾಲೆ ಬಿಡುವ ಹೆಣ್ಣು ಮಕ್ಕಳಿಗೆ ಶಾಲೆ ಬಿಡದಿರಲು ಉತ್ತೇಜನ ನೀಡುವ ಕಾರ್ಯಕ್ರಮವನ್ನು ಪ್ರಬಲಗೊಳಿಸಬೇಕು.

6. ಪಾಠಶಾಲೆಗಳಲ್ಲಿ ಮೂಲಭೂತ ಸೌಲಭ್ಯಗಳಾದ, ಉತ್ತಮ ಕಟ್ಟಡ, ಶೌಚಾಲಯ, ಕುಡಿಯುವ ನೀರು, ವಿದ್ಯಾರ್ಥಿನಿಯರಿಗೆ, ಆರೋಗ್ಯ ತಪಾಸಣೆ ಮುಂತಾದ ವ್ಯವಸ್ಥೆಗಳನ್ನು ಉತ್ತಮ ಪಡಿಸುವುದಲ್ಲದೆ ಶಿಕ್ಷಕರಿಗೆ ಪಾಠ ಮಾಡುವ ಕ್ರಮಗಳನ್ನು ಆಕರ್ಷಣೀಯವಾಗಿ ಮಾಡುವಂತೆ ನಿಯತಕಾಲಿಕ ಪುನಃಶ್ಚೇತನ ತರಬೇತಿಗಳನ್ನು ನೀಡುತ್ತಿರಬೇಕು.

7. ಸರ್ಕಾರಿ ಸಾಮ್ಯಗಳಲ್ಲಿರುವ ಸಮೂಹ ಮಾಧ್ಯಮಗಳು ಮಹಿಳಾ ಅಭಿವೃದ್ಧಿ ಮತ್ತು ಸಶಕ್ತತೆ ಕುರಿತು ಸಮಾಜವನ್ನು ಪುನರ್ ನಿರ್ಮಿಸಲು ಉತ್ತೇಜನ ಕೊಡುವಂತಹ ಹಾಗೂ ಮಹಿಳೆಯರಿಗಿರುವ ಸರ್ಕಾರ ಮತ್ತು ಸರ್ಕಾರೇತರ ಸೌಲಭ್ಯಗಳ ಬಗ್ಗೆ ವಿಶೇಷ ಕಾರ್ಯಕ್ರಮಗಳನ್ನು ಪ್ರಚಾರ ಮಾಡಬೇಕು.

8. ಗೀತಾ ಹರಿಹರನ್ ಮತ್ತು ವಂದನಾ ಶಿವ ಇವರ ಕೇಸಿನಲ್ಲಿ ವರಿಷ್ಠ ನ್ಯಾಯಾಲಯವು ತಂದೆಯಂತೆಯೇ ತಾಯಿಯೂ ಮಗುವಿನ ಸಹಜ ಪಾಲಕಿಯೆಂದು ನೀಡಿರುವ ತೀರ್ಮಾನಕ್ಕೆ ಅನುಗುಣವಾಗಿ ಮಕ್ಕಳನ್ನು ಶಾಲೆಗೆ ಸೇರಿಸುವಾಗ ತಂದೆಯ ಸಹಿಯನ್ನೂ ಮಾನ್ಯ ಮಾಡುವ ಹಾಗೆ ತಾಯಿಯ ಸಹಿಯನ್ನು ಮಾನ್ಯ ಮಾಡುವುದಲ್ಲದೆ ಜನ್ಮ ತಾರೀಖಿನ ಯಾವ ಪ್ರಮಾಣವನ್ನು ನೀಡಿದರೂ ಅದನ್ನು ಶಾಲೆಗಳು ಸ್ವೀಕರಿಸಬೇಕು.

*(Geetha Hariharan Vs. Reserve Bank of India and Vandana Shiva Vs. Jayantha Bandopadyaya, (National Profile on Women, Health and Development, India P.75)

9. ತಾಂತ್ರಿಕ ಶಿಕ್ಷಣ, ವೈದ್ಯಕೀಯ ಮುಂತಾದ ವೃತ್ತಿನಿರತ ವ್ಯಾಸಂಗಕ್ಕಾಗಿ ಇರುವ ಸಾಮಾನ್ಯ ಪ್ರವೇಶ ಪರೀಕ್ಷೆ (Common Entrance Test) ಯಲ್ಲಿ ಉತ್ತೀರ್ಣರಾಗುವ ಅಭ್ಯರ್ಥಿಗಳ ಪೈಕಿ ಶೇಕಡ 33ರಷ್ಟನ್ನು ಬಾಲಕಿಯರಿಗೆ ಮೀಸಲಿಡಬೇಕು.

10. ಬಡತನದ ರೇಖೆಗಿಂತ ಕೆಳಗಿರುವ ಕುಟುಂಬಗಳ ಹೆಣ್ಣು ಮಕ್ಕಳಿಗೆ ಶಿಕ್ಷಣದಲ್ಲಿ ಉತ್ತೇಜನ ನೀಡುವ ಹಾಗೂ ಸೂಕ್ತ ಸೌಲಭ್ಯಗಳನ್ನು ಒದಗಿಸಿ ಕೊಡುವ ಸಲುವಾಗಿ ಪ್ರೌಢಶಾಲೆ, ಕಾಲೇಜು ಹಾಗೂ ವೃತ್ತಿ ನಿರತ ತರಬೇತಿ ಕೇಂದ್ರಗಳಲ್ಲಿ ಅಭ್ಯಾಸ ಮಾಡುವ ಹೆಣ್ಣು ಮಕ್ಕಳಿಗಾಗಿ ಜಿಲ್ಲಾವಾರು ವಸತಿ ಗೃಹಗಳನ್ನು ಪ್ರಾರಂಭಿಸಬೇಕು.

11. ಬಾಲಕ ಬಾಲಕಿಯರಿಬ್ಬರೂ ಸಾಮಾನ್ಯ ಜ್ಞಾನಾಸಕ್ತರು, ಸರಳ ಜೀವಿಗಳು, ದೈವ ಭೀರುಗಳು ಹಾಗೂ ಧೈರ್ಯಶಾಲಿಗಳು ಮತ್ತು ಲಿಂಗ ಸಮಾನ ಚಿಂತಿತರೂ ಆಗುವಂತೆ ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ನೀತಿ ಪಾಠಗಳನ್ನು ಬೋಧಿಸಬೇಕು.

12. ಪ್ರತಿ ಕಾಲೇಜಿನಲ್ಲಿಯೂ ಹೆಣ್ಣು ಮಕ್ಕಳಿಗೆ ಸಹಾಯಕವಾಗುವಂತೆ ವೃತ್ತಿ ಮಾರ್ಗದರ್ಶನ ಹಾಗೂ ಸಲಹಾ ಕೇಂದ್ರಗಳನ್ನು ಸ್ಥಾಪಿಸಿ, ಅವರಿಗೆ ತಮ್ಮ ಸಮಸ್ಯೆಗಳಿಗೆ ಪರಿಹಾರ ಹುಡುಕಿಕೊಳ್ಳುವಂತೆ ಸಹಾಯಕವಾಗಬೇಕು.

13. ಮುಂಬಯಿಯಲ್ಲಿರುವ SNDT ಮತ್ತು ತಿರುಪತಿಯಲ್ಲಿರುವ ಪದ್ಮಾವತಿ ಮಹಿಳಾ ವಿಶ್ವವಿದ್ಯಾಲಯಗಳ ಮಾದರಿಯಲ್ಲಿ ಕರ್ನಾಟಕ ರಾಜ್ಯದಲ್ಲಿಯೂ ಮಹಿಳೆಯರಿಗೆ ಪ್ರತ್ಯೇಕವಾದ ಎರಡು ವಿಶ್ವವಿದ್ಯಾಲಯಗಳನ್ನು, ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದಲ್ಲಿ ಸ್ಥಾಪಿಸಬೇಕು.

14. ಭಾರತ ಆಡಳಿತ ಸೇವೆ ಹಾಗೂ ಕರ್ನಾಟಕ ಆಡಳಿತ ಸೇವೆಯಂತಹ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಹೆಣ್ಣು ಮಕ್ಕಳನ್ನು ತಯಾರು ಮಾಡುವ ಸಲುವಾಗಿ ವಿಭಾಗೀಯ ಮಟ್ಟದಲ್ಲಿ ಸೂಕ್ತವಾದ ತರಬೇತಿ ಕೇಂದ್ರಗಳನ್ನು ಸ್ಥಾಪಿಸಬೇಕು.

# 2. ಮಹಿಳಾ ಆರೋಗ್ಯ

ಆರೋಗ್ಯಕ್ಕೆ ಸಂಬಂಧಪಟ್ಟಂತೆ ಪ್ರತ್ಯೇಕ ಕ್ರಿಯಾ ಯೋಜನಾ ಸಮಿತಿಯೊಂದನ್ನು ಕರ್ನಾಟಕ ಸರ್ಕಾರ ರಚಿಸಿದ್ದು, ಈ ಸಮಿತಿಯು ಪ್ರತ್ಯೇಕವಾಗಿ ಮಹಿಳಾ ಆರೋಗ್ಯದ ಬಗ್ಗೆಯೂ ಪರಿಶೀಲನೆ ನಡೆಸುತ್ತಿರುವುದರಿಂದ ಮಹಿಳಾ ಅಭಿವೃದ್ಧಿ ಕ್ರಿಯಾ ಯೋಜನಾ ಸಮಿತಿಯು ಈ ಬಗ್ಗೆ ಸಂಕ್ಷಿಪ್ತವಾಗಿ ಚರ್ಚಿಸಿದೆ ಹಾಗೂ ಈ ಸಮಿತಿಯು ಮಾಡಿರುವ ಕೆಲವು ಸಲಹೆಗಳನ್ನು ಮಹಿಳಾ ಅಭಿವೃದ್ಧಿಯ ದೃಷ್ಟಿಯಿಂದ ಪುನರ್ ಉಚ್ಚರಿಸಿದೆ.

ರಾಷ್ಟ್ರೀಯ ಜನಸಂಖ್ಯೆ ನೀತಿ 2000 (National Population Policy, 2000) ಇದರಲ್ಲಿ ಮಹಿಳಾ ಅಭಿವೃದ್ಧಿ ಮತ್ತು ಮಹಿಳಾ ಆರೋಗ್ಯಕ್ಕೆ ಹೆಚ್ಚು ಒತ್ತು ಕೊಟ್ಟಿರುವುದು ಶುಭ ಸೂಚಕ. ಈ ಯೋಜನೆಯಲ್ಲಿ ಹೆಣ್ಣು ಮಕ್ಕಳ ಆರೋಗ್ಯಕ್ಕೆ ಮತ್ತು ಅವರಿಗೆ ಸಂಬಂಧಪಟ್ಟಂತೆ ಇತರ ಸಾಮಾಜಿಕ ವಿಷಯಗಳಿಗೆ ಆದ್ಯತೆ ಕೊಟ್ಟಿರುವುದು ಮಹಿಳಾ ಅಭಿವೃದ್ಧಿಯ ದಿಕ್ಕಿನಲ್ಲಿ ಒಂದು ಪ್ರಮುಖ ಹೆಜ್ಜೆಯಾಗಲಿದೆ. ಈ ನೀತಿಯಲ್ಲಿ 2010ರ ವರೆಗೆ ರಾಷ್ಟ್ರೀಯ ಸಾಮಾಜಿಕ ಹಾಗೂ ಜನಸಂಖ್ಯೆಯ ಗುರಿಗಳಲ್ಲಿ ಮಹಿಳೆಯರಿಗೆ ಸಂಬಂಧಪಟ್ಟ ವಿಷಯಗಳನ್ನು ಪ್ರಮುಖವಾಗಿ ಉಲ್ಲೇಖಿಸಿರುವುದು ಜನಸಂಖ್ಯಾ ಬೆಳವಣಿಗೆಯನ್ನು ಕಡಿಮೆ ಮಾಡಲು ಸಹಾಯಕವಾಗುವುದಲ್ಲದೆ ಮಹಿಳಾ ಅಭಿವೃದ್ಧಿಗೂ ಉತ್ತೇಜನ ಕೊಡಲಿದೆ. (ಅನುಬಂಧ 8)

1996ರಲ್ಲಿ ಭಾರತ ಸರ್ಕಾರದಿಂದ ಪ್ರಾರಂಭಿಸಲ್ಪಟ್ಟಿರುವ ಸಂತಾನೋತ್ಪತ್ತಿ ಮತ್ತು ಶಿಶು ಆರೋಗ್ಯ (Reproductive and Child Health) ಕಾರ್ಯಕ್ರಮದಲ್ಲಿ ಸ್ಪಷ್ಟವಾಗಿ ನಮೂದಿಸಲ್ಪಟ್ಟಿರುವಂತೆ ಅವಶ್ಯಕತಾನುಸಾರ, ವ್ಯಕ್ತಿಪರ ಬೇಡಿಕೆ ವೃದ್ಧಿಗೊಳಿಸುವ, ಉತ್ತಮ ಗುಣಮಟ್ಟದ ಸಂತಾನೋತ್ಪತ್ತಿ ಹಾಗೂ ಶಿಶು ಆರೋಗ್ಯ ಸೇವೆಯ ಪರಿಸ್ಥಿತಿ ಕರ್ನಾಟಕ ರಾಜ್ಯದಲ್ಲಿ ಯಾವ ಮಟ್ಟದಲ್ಲಿದೆ ಎಂಬುದನ್ನು ಕೂಲಂಕಷವಾಗಿ ಅಭ್ಯಸಿಸಬೇಕಾದ ಅವಶ್ಯಕತೆ ಇದೆ. ರಾಷ್ಟ್ರೀಯ ಕುಟುಂಬ ಆರೋಗ್ಯಗಳ ಪರಿವೀಕ್ಷಣೆ (National Family Health Survey -2) ಯಂತೆ ರಾಜ್ಯದಲ್ಲಿ ಶೇಕಡ 19 ವಿವಾಹಿತ ಮಹಿಳೆಯರು ಸಂತಾನೋತ್ಪತ್ತಿ ಆರೋಗ್ಯಕ್ಕೆ ಸಂಬಂಧಪಟ್ಟಂತೆ ಒಂದಲ್ಲ ಒಂದು ಸಮಸ್ಯೆಯನ್ನು ಹೊಂದಿದ್ದಾರೆ.

ಪೌಷ್ಟಿಕ ಆಹಾರಕ್ಕೆ ಸಂಬಂಧಪಟ್ಟಂತೆ ಕರ್ನಾಟಕದಲ್ಲಿ ಅನೇಕ ಉತ್ತಮ ಬದಲಾವಣೆಗಳಾಗುತ್ತಿದ್ದರೂ ಸಹ ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ನಗರಗಳ ಕೊಳಚೆ ಪ್ರದೇಶಗಳಲ್ಲಿ ಇನ್ನೂ ಹೆಚ್ಚಿನ ಹೆಣ್ಣು ಮಕ್ಕಳಿಗೆ ಸೂಕ್ತವಾದ ಪೌಷ್ಟಿಕ ಆಹಾರ ದೊರೆಯುತ್ತಿಲ್ಲದಿರುವುದು ಈ ಬಗ್ಗೆ ಸೂಕ್ತ ಗಮನಹರಿಸಬೇಕಾದ ಅವಶ್ಯಕತೆಯನ್ನು ತೋರಿಸುತ್ತದೆ. ಪೌಷ್ಟಿಕ ಆಹಾರವನ್ನು ಕೇವಲ ಆರೋಗ್ಯಕ್ಕೆ ಸಂಬಂಧಪಟ್ಟ ವಿಷಯವೆಂದು ಮಾತ್ರ ಪರಿಗಣಿಸದೆ ಅಪೌಷ್ಟಿಕತೆಯಿಂದ ಹೆಣ್ಣು ಮಕ್ಕಳ ಶಿಕ್ಷಣದ ಮೇಲೆ, ಹುಟ್ಟುವ ಮಕ್ಕಳ ಬೆಳವಣಿಗೆಯ ಮೇಲೆ ಮತ್ತು ಸಾಮಾಜಿಕ ಕಾರ್ಯಕ್ರಮಗಳಲ್ಲಿ ಮಹಿಳೆಯರು ಭಾಗವಹಿಸುವುದರ ಮೇಲೆ ಆಗುವ ಪರಿಣಾಮವನ್ನೂ ಗಮನಿಸಬೇಕು.

ಕರ್ನಾಟಕ ರಾಜ್ಯವು ಗ್ರಾಮೀಣ ಮತ್ತು ನಗರದ ಕೊಳಚೆ ಪ್ರದೇಶದ ಮಕ್ಕಳಿಗೆ ಪೌಷ್ಟಿಕ ಆಹಾರ ನೀಡುತ್ತಿರುವುದು ಶ್ಲಾಘನೀಯ. ಆದರೆ ಇದಕ್ಕೆ ನಿಗದಿಯಾಗಿರುವ ವಾರ್ಷಿಕ ಹಣ ಏನೇನೂ ಸಾಲದು. ಮತ್ತೆ ಕೆಲವು ಕಡೆ ಪೌಷ್ಟಿಕ ಆಹಾರ ನೀಡುವ ಜವಾಬ್ದಾರಿಯನ್ನು ಮಹಿಳಾ ಸಂಘ-ಸಂಸ್ಥೆಗಳಿಗೆ ವಹಿಸಿದ್ದರೂ ಸಹ, ಈ ಸಂಘ-ಸಂಸ್ಥೆಗಳು ತಮ್ಮ ಜವಾಬ್ದಾರಿಯನ್ನು ಬೇರೆಯ ವ್ಯಕ್ತಿಗಳಿಗೆ ವಹಿಸಿಕೊಟ್ಟಿರುವುದರಿಂದ ಕಾರ್ಯಕ್ರಮ ನಿರೀಕ್ಷಿಸಿದ ಮಟ್ಟದಲ್ಲಿ ನಡೆಯುತ್ತಿಲ್ಲವೆಂಬ ಬಗ್ಗೆಯೂ ದೂರುಗಳಿವೆ. ಇಂತಹ ದೂರುಗಳನ್ನು ಪರಿಶೀಲಿಸಿ ಕಾರ್ಯಕ್ರಮವನ್ನು ಸಕ್ರಮಗೊಳಿಸುವ ಮತ್ತು ಪೌಷ್ಟಿಕ ಆಹಾರಕ್ಕೆ ನಿಗದಿಪಡಿಸಿರುವ ಹಣವನ್ನು ಹೆಚ್ಚಿಸುವ ಬಗ್ಗೆ ಸರ್ಕಾರ ಇನ್ನೂ ಹೆಚ್ಚಿನ ಹೊಣೆ ಹೊತ್ತರೆ ಪೌಷ್ಟಿಕ ಆಹಾರ ವಿತರಣೆಯ ಉದ್ದೇಶ ಸಫಲವಾಗುತ್ತದೆ.

ರಾಜ್ಯಾದ್ಯಂತ 175 ತಾಲ್ಲೂಕುಗಳಲ್ಲಿ ಹಾಗೂ 10 ನಗರ ಪ್ರದೇಶಗಳಲ್ಲಿ ಇರುವ 40170 ಅಂಗನವಾಡಿಗಳು ಆಕರ್ಷಣೀಯ ಮತ್ತು ಮಕ್ಕಳು ಹಾಗೂ ತಾಯಿಯವರಿಗೆ ಅನುಕೂಲವಾಗುವಂತೆ ಬದಲಾದರೆ ಅಂಗನವಾಡಿಯ ಬಗ್ಗೆ ಸ್ಥಳೀಯ ಜನರು ಹೆಚ್ಚು ಆಸಕ್ತಿ ವಹಿಸುತ್ತಾರೆ. ಆದರೆ ಅಂಗನವಾಡಿಯ ಕಾರ್ಯಕರ್ತೆಯರ ಮೇಲೆ ಎಲ್ಲಾ ಇಲಾಖೆಗಳ ಕೆಲಸದ ಒತ್ತಡ ಜಾಸ್ತಿ ಆಗುತ್ತಿದ್ದು, ತಮ್ಮ ಮೂಲ ಜವಾಬ್ದಾರಿಯಾದ ಸಮಗ್ರ ಶಿಶು ಅಭಿವೃದ್ಧಿಯ ಕಾರ್ಯವನ್ನು ಪ್ರಭಾವಶಾಲಿಯಾಗಿ ಮಾಡಲಾಗದಾಗುತ್ತಿದ್ದಾರೆ ಹಾಗೂ ಇವರಿಗೆ ಸಿಗುತ್ತಿರುವ ಗೌರವಧನ ಪರಿಸ್ಥಿತಿಗೆ ಬಹಳ ಕಡಿಮೆ ಇದೆ ಮತ್ತು ಈ ಕಾರ್ಯಕರ್ತೆಯರ ಸ್ಥಳೀಯ ಸಮಸ್ಯೆಗಳನ್ನು ಬಗೆಹರಿಸಲು ಒಂದು ಪ್ರಭಾವಯುತವಾದ ವ್ಯವಸ್ಥೆಯ ಅವಶ್ಯಕತೆ ಇದೆ. ಈ ರೀತಿಯ ಬದಲಾವಣೆಗಳಾದರೆ ಸುಮಾರು ಮೂವತ್ತು ಲಕ್ಷ ಫಲಾನುಭವಿಗಳಿಗೆ ಅಂಗನವಾಡಿಯಿಂದ ಸಹಾಯವಾಗುತ್ತದೆ.

ಹಳ್ಳಿಗಳಲ್ಲಿ ಕುಡಿಯುವ ನೀರಿನ ಪೂರೈಕೆಗಾಗಿ ಕರ್ನಾಟಕ ಸರ್ಕಾರವು ಅನೇಕ ಯೋಜನೆಗಳನ್ನು ಹಾಕಿಕೊಂಡಿದ್ದು ಹೆಚ್ಚಿನ ಗ್ರಾಮಗಳಲ್ಲಿ ಕುಡಿಯುವ ನೀರು ದೊರೆಯುತ್ತಿರುವುದು ಹೆಮ್ಮೆ ಪಡಬಹುದಾದ ವಿಷಯ. ಹೀಗಿದ್ದಾಗ್ಯೂ ಇನ್ನೂ ಹೆಚ್ಚಿನ ಹಳ್ಳಿಗಳಲ್ಲಿ, ಅದರಲ್ಲೂ ಹಿಂದುಳಿದ ಜಿಲ್ಲೆಗಳ ಹಳ್ಳಿಗಳಲ್ಲಿ ಹಾಗೂ ಹಿಂದುಳಿದ ವರ್ಗದ ಜನರು ವಾಸಿಸುವ ಕೇರಿಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಇನ್ನೂ ಅಗಾಧವಾಗಿದೆ. ಇದರ ಪರಿಣಾಮವಾಗಿ ಮಹಿಳೆಯರು ಕುಡಿಯುವ ನೀರನ್ನು ಸಂಗ್ರಹಿಸಲು ಬಹಳ ದೂರ ನಡೆದು ಹೋಗಬೇಕಾಗಿರುವುದರಿಂದ ಅವರ ಮೇಲೆ ಶ್ರಮ ಜಾಸ್ತಿಯಾಗಿ ಹಾಗೂ ಕೆಲವು ಕಡೆ ಕಲುಷಿತ ನೀರನ್ನು ಸೇವಿಸುವುದರಿಂದ ವಿವಿಧ ರೀತಿಯ ರೋಗಗಳಿಂದ ನರಳುತ್ತಿದ್ದಾರೆ.

ಸ್ತನದ ಕ್ಯಾನ್ಸರ್‌ನಿಂದ ತೊಂದರೆಪಡುವ ಮಹಿಳೆಯರ ಸಂಖ್ಯೆ ಹೆಚ್ಚಾಗುತ್ತಿರುವುದು ದುಃಖದ ಸಂಗತಿ. ಹೀಗೆಯೇ ಅನೇಕ ಗರ್ಭಿಣಿ ಮಹಿಳೆಯರು ಕ್ಷಯ ಮತ್ತು ಮಲೇರಿಯಾ ರೋಗಗಳಿಂದ ನರಳುತ್ತಿದ್ದಾರೆ. ಇವುಗಳ ಬಗ್ಗೆ ಕಾಳಜಿ ವಹಿಸುವ ಸೂಕ್ತ ವೈದ್ಯಕೀಯ ವ್ಯವಸ್ಥೆ ಹತ್ತಿರದಲ್ಲಿ ಇಲ್ಲದಿರುವುದರಿಂದ ಈ ರೀತಿ ತೊಂದರೆಗೊಳಗಾಗಿರುವ ಮಹಿಳೆಯರಿಗೆ ಸೂಕ್ತ ಸಮಯದಲ್ಲಿ ಉಪಚಾರ ಸಿಗದೆ, ಈ ಮಹಿಳೆಯರು ಹತಾಶೆಯ ಭಾವನೆ ಹೊಂದಿದ್ದಾರೆ. ವಿವಿಧ ವಯಸ್ಸಿನ ಮಹಿಳೆಯರ ಆರೋಗ್ಯದ ಬಗ್ಗೆ ಸೂಕ್ತ ವ್ಯವಸ್ಥೆ ಹೆಚ್ಚಿನ ಪ್ರಮಾಣದಲ್ಲಿ ವಿಸ್ತಾರಗೊಳ್ಳಬೇಕಾಗಿದೆ. ಆರೋಗ್ಯಕ್ಕೆ ಸಂಬಂಧಪಟ್ಟ ಕಾರ್ಯವನ್ನು ಮಹಿಳೆಯರಿಗೆ ಉಪಯುಕ್ತವಾಗುವಂತೆ ಮಾಡಬೇಕಾದದ್ದು ಅತ್ಯಾವಶ್ಯಕವಾಗಿರುವುದರಿಂದ ಮಹಿಳಾ ಮತ್ತು ಮಕ್ಕಳ ಆರೋಗ್ಯ, ಪೌಷ್ಟಿಕ ಆಹಾರ ಮುಂತಾದ ವಿಷಯಗಳಿಗೆ ಸಂಬಂಧಪಟ್ಟಂತೆ ಆರೋಗ್ಯ ಕಾರ್ಯಕರ್ತರು ಶಿಕ್ಷಣ ಮತ್ತು ಸೇವಾ ಶಿಬಿರಗಳನ್ನು ಅಂಗನವಾಡಿಯ ಜೊತೆ ಸಂಯುಕ್ತವಾಗಿ ನಡೆಸುವುದು ಅವಶ್ಯಕ.

ಆರೋಗ್ಯ ಇಲಾಖೆಯಲ್ಲಿ ಮಹಿಳೆಯರಿಗೆ ಸಂಬಂಧಪಟ್ಟಂತೆ ಅನೇಕ ಕಾರ್ಯಕ್ರಮಗಳಿವೆ. ಸಧ್ಯದಲ್ಲಿ 1000 ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ಹುದ್ದೆಗಳು ಖಾಲಿ ಇವೆ. ಈ ರೀತಿ ಖಾಲಿ ಇರುವ ಪ್ರದೇಶಗಳಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಕೆಲಸ ಮಾಡಬೇಕೆಂದು ಹಾಗೂ ಈ ರೀತಿಯ ಹೆಚ್ಚುವರಿ ಕೆಲಸಕ್ಕಾಗಿ ತಿಂಗಳಿಗೆ ರೂ.250/- ಹೆಚ್ಚಿನ ಹಣ ಅಂಗನವಾಡಿ ಕಾರ್ಯಕರ್ತೆಯರಿಗೆ ನೀಡಬೇಕೆಂದು ಆರೋಗ್ಯ ಇಲಾಖೆ ತಿಳಿಸಿದೆ.

ಮಕ್ಕಳು ಬೆಳೆದು ದೊಡ್ಡವರಾಗುವುದು ಹಾಗೂ ಅವರಲ್ಲಿ ದೈಹಿಕ ಹಾಗೂ ಮಾನಸಿಕ ಬದಲಾವಣೆಗಳಾಗುವುದು ನೈಸರ್ಗಿಕವಾಗಿದ್ದರೂ ಸಹ, ಇಂತಹ ಬೆಳವಣಿಗೆಗಳ ಬಗ್ಗೆ ಹದಿಹರೆಯದ ಯುವಕ-ಯುವತಿಯರಿಗೆ ತಿಳುವಳಿಕೆ ಮೂಡಿಸುವಂತಹ ಕಾರ್ಯಕ್ರಮಗಳು ಸಾರ್ವತ್ರಿಕವಾಗಿ ಆಗಬೇಕಾಗಿದೆ. ಅನೇಕ ಸ್ವಯಂ ಸೇವಾ ಸಂಸ್ಥೆಗಳು ಈ ನಿಟ್ಟಿನಲ್ಲಿ ಕೆಲಸ ಮಾಡಿ ಮಾದರಿ ಕಾರ್ಯಕ್ರಮಗಳನ್ನು ಸ್ಥಳೀಯ ಮಟ್ಟದಲ್ಲಿ ಕಾರ್ಯಗತಗೊಳಿಸುತ್ತಿವೆ. ಈ ಅನುಭವಗಳ ಆಧಾರದ ಮೇಲೆ ಕುಟುಂಬ ಜೀವನ ಶಿಕ್ಷಣವನ್ನು (Family Life Education) ರೂಪಿಸಿ ಶಾಲೆಗೆ ಹೋಗುವ ಹಾಗೂ ಶಾಲೆಗೆ ಹೋಗದಿರುವ ಹೆಣ್ಣು ಮಕ್ಕಳಿಗೆ ಅನುಕೂಲವಾಗುವಂತೆ ಕಾರ್ಯಗತಗೊಳಿಸುವ ಅವಶ್ಯಕತೆ ಇದೆ.

ಭಾಟಿಯರವರ ಅಧ್ಯಯನವೊಂದರ ಪ್ರಕಾರ (National Profile on Women Health and Development, India, P.167) ಗ್ರಾಮೀಣ ಕರ್ನಾಟಕದಲ್ಲಿ ಶೇಕಡ 67 ರಷ್ಟು ಮಹಿಳೆಯರು ರಕ್ತ

ಹೀನತೆಯಿಂದ ಬಳಲುತ್ತಿದ್ದು, ಶೇಕಡ 17ರಷ್ಟು ಮಹಿಳೆಯರು ಅತೀ ರಕ್ತಹೀನತೆಯಿಂದ ಬಳಲುತ್ತಿದ್ದಾರೆ. ಇದರ ಪರಿಣಾಮವಾಗಿ ಸ್ತ್ರೀಯರ ಆರೋಗ್ಯದ ಮೇಲೆ ಅದರಲ್ಲೂ ಅವರ ಸಂತಾನೋತ್ಪತ್ತಿ ಆರೋಗ್ಯದ ಮೇಲೆ ಹೆಚ್ಚಿನ ದುಷ್ಪರಿಣಾಮಗಳುಂಟಾಗುತ್ತವೆ. ಉತ್ತಮ ಆರೋಗ್ಯ ಮತ್ತು ಪೌಷ್ಟಿಕಾಂಶಗಳು ಬಡಜನರ ಉತ್ಪಾದಕ ಶಕ್ತಿಯನ್ನು ಹೆಚ್ಚಿಸುತ್ತದೆ ಎಂಬುದು ಅನೇಕ ಅಧ್ಯಯನಗಳಿಂದ ಗೊತ್ತಾಗಿದೆ.

ಗರ್ಭಿಣಿ ಮಹಿಳೆಯರಿಗೆ ಸರಿಯಾದ ಪೌಷ್ಟಿಕ ಆಹಾರ ದೊರೆಯದೆ ಇರುವುದರ ಪರಿಣಾಮವಾಗಿ ಹುಟ್ಟುವ ಶಿಶುವು, ಅಕಾಲಿಕ ಮರಣಕ್ಕೆ ತುತ್ತಾಗುವ ಸಾಧ್ಯತೆ ಬಹಳ ಹೆಚ್ಚಿದೆ. ಅದರಲ್ಲೂ ಹೆಣ್ಣು ಮಕ್ಕಳ ಬಗ್ಗೆ ಇರುವ ತಾತ್ಸಾರ ಮನೋಭಾವವೂ ಹುಟ್ಟಿದ ಸಮಯದಲ್ಲಿ ಶಿಶುವಿಗೆ ದೊರೆಯಬೇಕಾದ ಸೌಲಭ್ಯದಿಂದ ಹೆಣ್ಣು ಶಿಶು ವಂಚಿತವಾಗುತ್ತಿದೆ. ಇವೆಲ್ಲದರ ಪರಿಣಾಮವಾಗಿ ಕರ್ನಾಟಕ ರಾಜ್ಯದಲ್ಲಿ ಶಿಶು ಮರಣ ಸಂಖ್ಯೆ 66 ಇದ್ದು, ನೆರೆ ರಾಜ್ಯಗಳಾದ ತಮಿಳುನಾಡು, ಕೇರಳ ಮತ್ತು ಗೋವಾಗಳ ಸಂಖ್ಯೆಗಿಂತ ಹೆಚ್ಚಾಗಿದೆ. ಇದರ ಪರಿಣಾಮವಾಗಿ ಕುಟುಂಬ ಯೋಜನಾ ಪದ್ಧತಿಗಳನ್ನು ಒಪ್ಪಿರುವ ದಂಪತಿಗಳ ಸಂಖ್ಯೆ ಕಡಿಮೆ ಇದ್ದು ಪ್ರತಿ ತಾಯಿಗೆ ಹುಟ್ಟುವ ಮಕ್ಕಳ ಸಂಖ್ಯೆ ಕರ್ನಾಟಕದಲ್ಲಿ ಇನ್ನೂ ಸಾಕಷ್ಟು ಪ್ರಮಾಣದಲ್ಲಿ ಕಡಿಮೆಯಾಗಿಲ್ಲ.

**ಈ ಕೆಳಗಿನ ಪಟ್ಟಿ ತುಲನಾತ್ಮಕ ಚಿತ್ರವನ್ನು ನೀಡುತ್ತದೆ.**

| ರಾಜ್ಯ | ಪ್ರತಿ ತಾಯಿಗೆ ಹುಟ್ಟುವ ಮಕ್ಕಳ ಸಂಖ್ಯೆಯ ಸರಾಸರಿ (TFR)a | ಶಿಶು ಮರಣ ದರ (IMR)b | ಕುಟುಂಬ ಯೋಜನಾ ಪದ್ಧತಿಯನ್ನು ಒಪ್ಪಿರುವ ಅರ್ಹ ದಂಪತಿಗಳು (CPR)c (ಪ್ರತಿಶತ) |
|---|---|---|---|
| ಕರ್ನಾಟಕ | 2.5 | 66 | 50.3 |
| ತಮಿಳುನಾಡು | 2.0 | 53 | 50.4 |
| ಗೋವಾ | 1.0 | 23 | 27.1 |
| ಕೇರಳ | 1.8 | 16 | 40.5 |
| **ಭಾರತ** | **3.3** | **72** | **44.0** |

a (TFR)- Total Fertility Rate (ತನ್ನ ಸಂತಾನೋತ್ಪತ್ತಿ ಅವಧಿಯಲ್ಲಿ (15-49) ವರ್ಷಗಳು ಫಲವತ್ತತೆ ಸ್ವರೂಪವನ್ನು ಅನುಭವಿಸುವ ಮಹಿಳೆಗೆ ಹುಟ್ಟುವ ಮಕ್ಕಳ ಸರಾಸರಿ ಸಂಖ್ಯೆ)

b IMR - Infant Mortality Rate (ಒಂದು ವರ್ಷದಲ್ಲಿ ಪ್ರತಿ 1000 ಜೀವಂತ ಜನನಗಳ ಪೈಕಿ ಒಂದು ವರ್ಷಕ್ಕೂ ಕಡಿಮೆ ವಯಸ್ಸಿನಲ್ಲಿ ಸಾಯುವ ಶಿಶುಗಳ ಸಂಖ್ಯೆ)

c CPR - Couple Protection Rate (ಪ್ರತಿ 100 ಅರ್ಹ ದಂಪತಿಗಳಲ್ಲಿ ಕುಟುಂಬ ಯೋಜನೆಯ ಯಾವುದಾದರೂ ಒಂದು ವಿಧಾನವನ್ನು ಒಪ್ಪಿರುವ ದಂಪತಿಗಳ ಸಂಖ್ಯೆ)

1995ರ ಯೂನಿಸೆಫ್ (UNICEF) ನ ಅಂಕಿಅಂಶಗಳ ಪ್ರಕಾರ ಕೇರಳ ರಾಜ್ಯದ ಮಾತೃ ಮರಣ ಸಂಖ್ಯೆ *(MMR) ಕೇವಲ 87 ಇದ್ದರೆ ಕರ್ನಾಟಕ ರಾಜ್ಯದಲ್ಲಿ 450 ಇದೆ. (National Profile on Women, Health and Development, India, P.192) ಇದಕ್ಕೆ ಪ್ರಸವ ಕಾಲದ ಸೋಂಕು, ರಕ್ತ ಸ್ರಾವ, ಮತ್ತು ಗರ್ಭಪಾತ ಇವುಗಳ ಗ್ರಾಮೀಣ ಕರ್ನಾಟಕದಲ್ಲಿ ಪ್ರಮುಖ ಕಾರಣಗಳು. ಗರ್ಭಪಾತವು ಕಾನೂನುಬದ್ಧವಾಗಿದ್ದರೂ ಮಾತೃ ಮರಣ ಸಂಖ್ಯೆಗೆ ಗರ್ಭಪಾತವೂ ಒಂದು ಮುಖ್ಯ ಕಾರಣವಾಗಿರುವುದು, ಗರ್ಭಪಾತಕ್ಕೆ ಸಂಬಂಧಪಟ್ಟಂತೆ ವೈದ್ಯಕೀಯ ಸೌಲಭ್ಯಗಳನ್ನು ಇನ್ನೂ ಹೆಚ್ಚು ವಿಸ್ತರಿಸಬೇಕೆಂಬುದಕ್ಕೆ ಒಂದು ಸೂಚ್ಯಾಂಕವಾಗಿದೆ. ಗರ್ಭಧಾರಣೆಯ ಪೂರ್ವದಲ್ಲಿ ಹಾಗೂ ಗರ್ಭಧಾರಣೆಯ ಸಮಯದಲ್ಲಿ ಮಹಿಳೆಯರಿಗೆ ಸೂಕ್ತವಾದ ಪೌಷ್ಟಿಕ ಆಹಾರ ದೊರೆಯದೇ ಇರುವುದರಿಂದ ಹೆಚ್ಚಿನ ಮಹಿಳೆಯರು ರಕ್ತಹೀನತೆಯಿಂದ ಬಳಲುತ್ತಿದ್ದಾರೆ.

ಗರ್ಭದಲ್ಲಿರುವ ಮಗುವಿನ ಲಿಂಗವನ್ನು ತಿಳಿಸುವುದರ ವಿರುದ್ಧ ಮಹಾರಾಷ್ಟ್ರದಲ್ಲಿ ನಡೆದ ಮಹಿಳಾ ಆಂದೋಲನದ ಪರಿಣಾಮವಾಗಿ ಮಹಾರಾಷ್ಟ್ರ ಸರ್ಕಾರವು ಈ ಬಗ್ಗೆ "Maharashtra Regulation of Prenatal Diagnostic Technique Act, 1988"ನ್ನು ಜಾರಿಗೊಳಿಸಿದ್ದು, ನಂತರ ರಾಷ್ಟ್ರವ್ಯಾಪಿಯಾಗುವಂತೆ ಕೇಂದ್ರ ಸರ್ಕಾರವು 1994ರಲ್ಲಿ "Prenatal Diagnostic Techniques (Regulation and Prevention of Misuse) Act" ನ್ನು ಜಾರಿಗೊಳಿಸಿತು. ಈ ಕಾಯಿದೆಯ ಪ್ರಕಾರ ಗರ್ಭದಲ್ಲಿರುವ ಮಗುವಿನ ಲಿಂಗವನ್ನು ತಿಳಿಯುವುದು ಮತ್ತು ತಿಳಿಸುವುದು ಕಾನೂನುಬಾಹಿರವಾಗಿರುತ್ತದೆ. ಹೀಗಿದ್ದಾಗ್ಯೂ ಕರ್ನಾಟಕದಲ್ಲಿ ಈ ಕಾನೂನಿನ ಪರಿಪಾಲನೆ ಸರಿಯಾಗಿ ಆಗುತ್ತಿದೆಯೇ ಎಂಬುದನ್ನು ಅಭ್ಯಸಿಸುವ ಅವಶ್ಯಕತೆ ಇದೆ.

ಅನೇಕ ಹಳ್ಳಿಗಳಲ್ಲಿ ಶೌಚಾಲಯವಿಲ್ಲದಿರುವುದರಿಂದ ಮಹಿಳೆಯರಿಗೆ ತಮ್ಮ ನೈಸರ್ಗಿಕ ಕ್ರಿಯೆಯನ್ನು ಪೂರೈಸಲು ತೊಂದರೆಯಾಗುತ್ತಿದೆ. ನಿರ್ಮಲ ಗ್ರಾಮ ಯೋಜನೆಯಡಿಯಲ್ಲಿ ಸರ್ಕಾರವು 1999-2000ದಲ್ಲಿ ರಾಜ್ಯದಲ್ಲಿ 1,01,279 ಶೌಚಾಲಯಗಳನ್ನು ನಿರ್ಮಿಸಿರುವುದು ಶ್ಲಾಘನೀಯ. ಆದರೆ ಕೆಲವು ಕಡೆಗಳಲ್ಲಿ ಹೀಗೆ ಶೌಚಾಲಯವನ್ನು ಕಟ್ಟಿಸಿರುವ ಕಡೆ ಸರಿಯಾದ ನೀರಿನ ವ್ಯವಸ್ಥೆ ಇಲ್ಲದೆ ಶೌಚಾಲಯದ ಬಳಕೆಯಾಗುತ್ತಿಲ್ಲವೆಂಬ ದೂರುಗಳಿವೆ. ಸ್ವಚ್ಛತೆಯ ದೃಷ್ಟಿಯಿಂದ ಮತ್ತು ಮಹಿಳೆಯರ ಆರೋಗ್ಯದ ದೃಷ್ಟಿಯಿಂದ ಸಮರ್ಪಕವಾದ ಶೌಚಾಲಯದ ವ್ಯವಸ್ಥೆ ತ್ವರಿತವಾಗಿ ಆಗುವುದು ಅತ್ಯವಶ್ಯಕ.

ಹೊಗೆ ರಹಿತ ಒಲೆಗಳ ಬಳಕೆಯಿಂದ ಮಹಿಳಾ ಆರೋಗ್ಯದ ಮೇಲೆ ಉತ್ತಮ ಪ್ರಭಾವ ಬೀರುವುದೆಂಬುದು ಗೊತ್ತಿರುವ ವಿಷಯ. 1999-2000ದಲ್ಲಿ ರಾಷ್ಟ್ರೀಯ ಸುಧಾರಿತ ಒಲೆ ಕಾರ್ಯಕ್ರಮದಡಿಯಲ್ಲಿ ಕರ್ನಾಟಕ ಸರ್ಕಾರವು ರಾಜ್ಯದಲ್ಲಿ 13,331 ಕುಟುಂಬಗಳಿಗೆ ಸಹಾಯಕವಾಗಿರುವುದು ಪ್ರಶಂಸನೀಯ. ಮೈಸೂರು ಜಿಲ್ಲೆಯ ವರುಣ ಗ್ರಾಮದಂತಹ ಕೆಲವು ಹಳ್ಳಿಗಳು ಹೊಗೆ ರಹಿತ ಗ್ರಾಮಗಳೆಂದು ಹೆಸರು ಪಡೆದಿರುವುದು ಮಹಿಳೆಯರಿಗೆ ಉಪಯೋಗವಾಗುವ ಈ ತಂತ್ರಜ್ಞಾನವನ್ನು ಅವರಿಗೆ ಮುಟ್ಟಿಸುವ ಬಗ್ಗೆ ಸಂಬಂಧಪಟ್ಟ ಇಲಾಖೆಯ ಇನ್ನೂ ಹೆಚ್ಚಿನ ಗಮನ ಹರಿಸಿದರೆ, ಗ್ರಾಮೀಣ ಮಹಿಳೆಯರಿಗೆ ಇನ್ನೂ ಉಪಯೋಗವಾಗುತ್ತದೆ.

ಲಿಂಗಭೇದದ ಪರಿಣಾಮವಾಗಿ ವರದಕ್ಷಿಣೆಯ ಕಿರುಕುಳ, ಗಂಡು ಮಕ್ಕಳಾಗಿಲ್ಲವೆಂಬ ನಿಂದನೆ, ಲೈಂಗಿಕ ದೌರ್ಜನ್ಯ, ಬಡತನ ಮತ್ತು ಕುಡಿಯುವ ಗಂಡ ಮತ್ತಿತರ ವಿಷಯಗಳಿಂದ ಮಹಿಳೆಯರ ಮೇಲೆ ಮಾನಸಿಕ ಒತ್ತಡವಾಗಿ ಅವರ ಮಾನಸಿಕ ಆರೋಗ್ಯ ಹದೆಗೆಡುವುದಕ್ಕೆ ಕಾರಣವಾಗಿದೆ. ಸುದೈವವಶಾತ್, ಬೆಂಗಳೂರಿನಲ್ಲಿರುವ ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆಯು (NIMHANS) ಮಹಿಳೆಯರಿಗೆ ಸಂಬಂಧಪಟ್ಟಂತೆ ಮಾನಸಿಕ ಸ್ವಾಸ್ಥ್ಯದ ಬಗ್ಗೆ ಸಮಾಜದಲ್ಲಿ ಸರಿಯಾದ ತಿಳುವಳಿಕೆ ಕಾರ್ಯಕ್ರಮಗಳನ್ನು ನಡೆಸುತ್ತಿರುವುದು ಶ್ಲಾಘನೀಯ. ಈ ಕಾರ್ಯಕ್ರಮಗಳು ರಾಜ್ಯದ ಮಹಿಳೆಯರ ಹಿತದೃಷ್ಟಿಯಿಂದ ಇನ್ನೂ ವಿಸ್ತಾರವಾಗಬೇಕಾದ ಅವಶ್ಯಕತೆಯಿದೆ.

*MMR - ಒಂದು ವರ್ಷದಲ್ಲಿ ಪ್ರತಿ ಒಂದು ಲಕ್ಷ ಜೀವಂತ ಜನನಗಳಿಗೆ ಗರ್ಭಧಾರಣೆ ಹಾಗೂ ಶಿಶುವಿಗೆ ಜನ್ಮ ಕೊಡುವುದಕ್ಕೆ ಸಂಬಂಧಪಟ್ಟ ಯಾವುದೇ ಕಾರಣವಾಗಿ ಗರ್ಭಿಣಿಯಾಗಿರುವಾಗ ಅಥವಾ ಗರ್ಭವನ್ನು ಕೊನೆಗಾಣಿಸಿದ 42 ದಿನಗಳ ಒಳಗಾಗಿ ನಿಧನರಾಗುವ ಮಹಿಳೆಯರ ಸಂಖ್ಯೆ.

## ಸಲಹೆಗಳು:

1. ಎಲ್ಲಾ ಗರ್ಭಿಣಿ ಮಹಿಳೆಯರ ಪೂರ್ಣ ಆರೋಗ್ಯ ತಪಾಸಣೆಗಾಗಿ, **"ಆರೋಗ್ಯ ತಪಾಸಣಾ ಚೀಟಿ"** ಯನ್ನು ನೀಡಿ ಅವರ ಆರೋಗ್ಯ ತಪಾಸಣೆ ತಿಂಗಳಿಗೊಮ್ಮೆಯಾದರೂ ಕಡ್ಡಾಯವಾಗಿ ಆಗಬೇಕು ಹಾಗೂ ಅವರಿಗೆ ಸೂಕ್ತ ಚಿಕಿತ್ಸೆಯನ್ನು ನೀಡಲು ಆರೋಗ್ಯ ಇಲಾಖೆಯ ವ್ಯವಸ್ಥೆಯಲ್ಲಿ ಸೂಕ್ತವಾಗಿ ಬದಲಾವಣೆಯಾಗಬೇಕು, ಅದರಲ್ಲೂ ಹೆಚ್ಚಿನ ಸಂಖ್ಯೆಯಲ್ಲಿ ಗರ್ಭಿಣಿಯರು ಕ್ಷಯ ಮತ್ತು ಮಲೇರಿಯ ರೋಗಕ್ಕೆ ತುತ್ತಾಗುತ್ತಿರುವ ಪ್ರದೇಶಗಳಲ್ಲಿ ಗರ್ಭಿಣಿ ಮಹಿಳೆಯರ ಆರೋಗ್ಯದ ಕಡೆ ಹೆಚ್ಚಿನ ಗಮನ ಕೊಡುವಂತಹ ವಾತಾವರಣ ಉಂಟಾಗಬೇಕು.

2. ಸ್ತನದ ಕ್ಯಾನ್ಸರ್ ಬಗ್ಗೆ ವಿವಿಧ ವಯಸ್ಸಿನ ಮಹಿಳೆಯರಿಗೆ ಸೂಕ್ತ ಮಾಹಿತಿ ಒದಗಿಸಿಕೊಡಬೇಕು ಹಾಗೂ ಇದರಿಂದ ತೊಂದರೆ ಪಡುತ್ತಿರುವ ಮಹಿಳೆಯರಿಗೆ ಶೀಘ್ರವಾಗಿ ಸೂಕ್ತವಾದ ಉಪಚಾರ ಸಿಗುವಂತಹ ವ್ಯವಸ್ಥೆಯಾಗಬೇಕು.

   ಗ್ರಾಮೀಣ ಪ್ರದೇಶಗಳಲ್ಲಿ ಸಹಕಾರದ ಆಧಾರದ ಮೇಲೆ ಅಂಬುಲೆನ್ಸ್ ಗಳನ್ನು ಸ್ಥಾಪಿಸಲು ಸರ್ಕಾರ ಉತ್ತೇಜನ ನೀಡಬೇಕು. ಇದರಿಂದ ಗರ್ಭಿಣಿ ಮಹಿಳೆಯರನ್ನು ಸೂಕ್ತ ಸಮಯದಲ್ಲಿ ಆಸ್ಪತ್ರೆಗೆ ಸಾಗಿಸಲು ಅನುಕೂಲವಾಗುತ್ತದೆ.

   ಹೆರಿಗೆಯು ಸುಸೂತ್ರವಾಗಿ ಆಗುವಂತೆ ಸುರಕ್ಷಿತ ಹೆರಿಗೆಯ ಬಗ್ಗೆ ಸ್ಥಳೀಯ ದಾಯಿಯರಿಗೆ ಹೆಚ್ಚಿನ ತರಬೇತಿ ನೀಡುವುದಲ್ಲದೇ ಹೆರಿಗೆ ಕಾರ್ಯದಲ್ಲಿ ಅವರು ಉಪಯೋಗಿಸುವ ಸಾಮಾಗ್ರಿಗಳನ್ನು ನಿಯತಕಾಲಿಕವಾಗಿ ಪೂರೈಸುತ್ತಿರಬೇಕು.

3. ಹದಿಹರೆಯದ ಬಾಲಕಿಯರಿಗೆ ತಮ್ಮಲ್ಲಾಗುವ ದೈಹಿಕ ಮತ್ತು ಮಾನಸಿಕ ಬದಲಾವಣೆಗಳ ಬಗ್ಗೆ ಸೂಕ್ತ ಮಾಹಿತಿ ನೀಡುವ ಅನೌಪಚಾರಿಕ ಹದಿಹರೆಯದವರ ಶಿಕ್ಷಣ (Adolescent Education) ಕಾರ್ಯಕ್ರಮವೊಂದು ರೂಪುಗೊಳ್ಳಬೇಕು. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ಆರೋಗ್ಯ ಮತ್ತು ಶಿಕ್ಷಣ ಇಲಾಖೆಗಳು ಅನುಭವವಿರುವ ಸ್ವಯಂ ಸೇವಾ ಸಂಸ್ಥೆಗಳ ಸಹಾಯದಿಂದ ಇಂತಹ ಕಾರ್ಯಕ್ರಮಗಳನ್ನು ರೂಪಿಸಿ ಸಾರ್ವತ್ರಿಕವಾಗಿ ರಾಜ್ಯಾದ್ಯಂತ ವಿಸ್ತಾರಗೊಳಿಸಬೇಕು. ಇಂತಹ ಕಾರ್ಯಕ್ರಮಗಳ ಸೌಲಭ್ಯ ಇದೆ ಎಂಬುದರ ಬಗ್ಗೆಯೂ ಸಮಾಜದಲ್ಲಿ ಪ್ರಚಾರವಾಗಬೇಕು.

4. ಮಹಿಳಾ ಆರೋಗ್ಯಕ್ಕೆ ಸಂಬಂಧಪಟ್ಟಂತೆ ಕನ್ನಡದಲ್ಲಿ ದೊರೆಯುವ ಎಲ್ಲಾ ಸರ್ಕಾರಿ ಹಾಗೂ ಸರ್ಕಾರೇತರ ಪ್ರಕಟಣೆಗಳನ್ನು ಪ್ರತಿ ಹಳ್ಳಿಯಲ್ಲೂ ಆರೋಗ್ಯ ಕಾರ್ಯಕರ್ತೆಯರಿಗೆ, ಸ್ವಯಂ ಸೇವಾ ಸಂಸ್ಥೆಗಳಿಗೆ ಹಾಗೂ ಮಹಿಳಾ ಪಂಚಾಯಿತಿ ಸದಸ್ಯರಿಗೆ ದೊರೆಯುವಂತಾಗಬೇಕು ಹಾಗೂ ಇವರುಗಳು ಈ ಪ್ರಕಟಣೆಗಳಲ್ಲಿರುವ ಮಾಹಿತಿಯನ್ನು ಗ್ರಾಮಗಳಲ್ಲಿ ಸೂಕ್ತ ಸಮಯದಲ್ಲಿ ಸೂಕ್ತ ವ್ಯಕ್ತಿಗಳಿಗೆ ನೀಡುವಂತೆ ತರಬೇತಿ ನೀಡಬೇಕು. ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಇಲಾಖೆ ಈ ಕೆಲಸದ ಜವಾಬ್ದಾರಿ ವಹಿಸಬೇಕು.

5. ಸಮಗ್ರ ಶಿಶು ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವ ಅಂಗನವಾಡಿ ಕಾರ್ಯಕ್ರಮಗಳ ಅನುಷ್ಠಾನವನ್ನು ಸ್ಥಳೀಯವಾಗಿ ಉಪಯುಕ್ತವಾಗುವಂತೆ ಮಾಡಲು ಅಂಗನವಾಡಿಯನ್ನು ನಡೆಸುವ ಜವಾಬ್ದಾರಿಯನ್ನು ಜಿಲ್ಲಾ/ತಾಲ್ಲೂಕು ಪಂಚಾಯಿತಿಯಿಂದ ಗ್ರಾಮ ಪಂಚಾಯಿತಿಗೆ ವರ್ಗಾಯಿಸಿ, ಸ್ಥಳೀಯ ಬಾಲವಿಕಾಸ ಮಹಿಳಾ ಸಮಿತಿಗಳನ್ನು ಈ ಕಾರ್ಯದಲ್ಲಿ ಸಕ್ರಿಯವಾಗಿ ತೊಡಗಿಸಿ, ನಿಯತಕಾಲಿಕವಾಗಿ ಅನುಷ್ಠಾನದ ಮೌಲ್ಯಮಾಪನವನ್ನು ಮಾಡುತ್ತಿರಬೇಕು. ಅಂಗನವಾಡಿ ಕಾರ್ಯಕರ್ತೆಯರ ಮೇಲೆ ಸರ್ಕಾರದ ಬಹುತೇಕ ಇಲಾಖೆಗಳು ಹೆಚ್ಚಿನ ಕೆಲಸದ ಒತ್ತಡ ಹೇರುತ್ತಿರುವುದರ ಮೇಲೆ ತ್ವರಿತವಾಗಿ ನಿರ್ಬಂದ ಹಾಕಿ, ಇವರು ತಮ್ಮ ಕರ್ತವ್ಯವನ್ನು ಉತ್ತಮವಾಗಿ ನಿರ್ವಹಿಸಲು ಅನುಕೂಲ ಮಾಡುವುದಲ್ಲದೆ, ಅಂಗನವಾಡಿಯ ಮೂಲಕ ನೀಡುತ್ತಿರುವ ಪೌಷ್ಠಿಕ ಆಹಾರಕ್ಕೆ ಪ್ರತಿ ಮಗುವಿಗೆ ಈಗ ನಿಗದಿಯಾಗಿರುವ ರೂ.1.25 ರಿಂದ ರೂ.3.00ಕ್ಕೆ ಹೆಚ್ಚಿಸಬೇಕು.

6. ಕುಡಿಯುವ ನೀರಿನ ಸಮಸ್ಯೆಗಳು ಇರುವ ಹಳ್ಳಿಗಳನ್ನು ಹಾಗೂ ಹಳ್ಳಿಗಳಲ್ಲಿರುವ ವಿವಿಧ ಭಾಗಗಳನ್ನು ಗುರುತಿಸಿ ಒಂದು ನಿರ್ಧಿಷ್ಟ ಕಾಲಾವಧಿಯಲ್ಲಿ ಉತ್ತಮ ಕುಡಿಯುವ ನೀರಿನ ವ್ಯವಸ್ಥೆ ಮಾಡುವ ಸಲುವಾಗಿ ಒಂದು ಯೋಜನೆಯನ್ನು ರೂಪಿಸುವುದಲ್ಲದೆ, ಈ ಯೋಜನೆಯನ್ನು ಸ್ಥಳೀಯವಾಗಿ ಅನುಷ್ಠಾನಗೊಳಿಸುವಾಗ ಸ್ಥಳೀಯ ಮಹಿಳೆಯರ ಅಭಿಪ್ರಾಯಕ್ಕೆ ಅನುಗುಣವಾಗಿ ಸ್ಥಳೀಯ ಯೋಜನೆಗಳನ್ನು ರೂಪಿಸಿ ನಿರ್ಧಿಷ್ಟ ಕಾಲಾವಧಿಯಲ್ಲಿ ಕಾರ್ಯಗತಗೊಳಿಸಬೇಕು.

7. ರಾಜ್ಯದಲ್ಲಿ ಈಗಿರುವ ಶೌಚಾಲಯಗಳು ಸಾಲದೇ ಹೆಚ್ಚಿನ ಗ್ರಾಮೀಣ ಮಹಿಳೆಯರಿಗೆ ಶೌಚಾಲಯದ ಕೊರತೆ ಇರುವುದರಿಂದ ಪ್ರತಿ ಗ್ರಾಮಗಳಲ್ಲಿ ಮಹಿಳೆಯರಿಗಾಗಿ ಸುಲಭ ಶೌಚಾಲಯಗಳ ಸಮರ್ಪಕ ವ್ಯವಸ್ಥೆಯ ಜವಾಬ್ದಾರಿಯನ್ನು ಗ್ರಾಮ ಪಂಚಾಯಿತಿಗಳಿಗೆ 2001-02 ವರ್ಷದಲ್ಲಿಯೇ ವಹಿಸಬೇಕು. ಇದಕ್ಕಾಗಿ ಸರ್ಕಾರದಿಂದ ನಿಗದಿತವಾದ ಹಣ, ಈ ಶೌಚಾಲಯದ ನಿರ್ಮಾಣ/ವ್ಯವಸ್ಥೆಗಾಗಿಯೇ ಖರ್ಚಾಗುತ್ತಿದೆಯೇ ಎಂಬುದರ ಬಗ್ಗೆ ಸೂಕ್ತ ಮೇಲ್ವಿಚಾರಣೆ ಮಾಡುವ ಜವಾಬ್ದಾರಿಯನ್ನೂ ಸ್ಥಳೀಯ ಗ್ರಾಮ ಪಂಚಾಯಿತಿಗಳಿಗೆ ವಹಿಸಬೇಕು.

8. ಹೊಗೆರಹಿತ ಒಲೆಗಳ ಬಳಕೆ ಇಲ್ಲದಿರುವ ಗ್ರಾಮಗಳನ್ನು ಮತ್ತು ಕುಟುಂಬಗಳನ್ನು ಗುರುತಿಸಿ ಹೊಗೆರಹಿತ ಗ್ರಾಮವಾದ ಮೈಸೂರು ಜಿಲ್ಲೆಯ ವರುಣ ಗ್ರಾಮದಂತೆ ಎಲ್ಲಾ ಗ್ರಾಮಗಳಲ್ಲೂ ಹೊಗೆ ರಹಿತ ಒಲೆಗಳನ್ನು ಉಪಯೋಗಿಸಲು ಪ್ರೇರೇಪಿಸುವ ಶಿಕ್ಷಣ ಕಾರ್ಯಕ್ರಮಗಳನ್ನು ರೂಪಿಸಿ ಅರ್ಹ ವ್ಯಕ್ತಿಗಳಿಗೆ ಸೂಕ್ತ ನೆರವನ್ನು ವಿಸ್ತರಿಸಬೇಕು.

9. ಮಹಿಳಾ ಆರೋಗ್ಯ ಕಾರ್ಯಕರ್ತರಿಗೆ ಹಾಗೂ ಅಂಗನವಾಡಿ ಕಾರ್ಯಕರ್ತೆಯರಿಗೆ ಅವರು ಕೆಲಸ ಮಾಡುತ್ತಿರುವ ಗ್ರಾಮಗಳಲ್ಲಿ ಅವರ ಜೀವನಕ್ಕೆ ಅನುಕೂಲವಾಗುವಂತೆ ನೀರು, ಶೌಚಾಲಯ ಮುಂತಾದ ವ್ಯವಸ್ಥೆಗಳು ಸಮರ್ಪಕವಾಗುವಂತೆ ಸೂಕ್ತ ವಸತಿ ವ್ಯವಸ್ಥೆಯನ್ನು ಮಾಡುವುದಲ್ಲದೆ, ರಾಷ್ಟ್ರೀಯ ಜನಸಂಖ್ಯಾ ಯೋಜನೆ 2000ದಲ್ಲಿ ನಮೂದಿಸಿರುವಂತೆ ಮಹಿಳಾ ಕಾರ್ಯಕರ್ತೆಯರ ಓಡಾಟಕ್ಕೆ ಅನುಕೂಲವಾಗುವಂತೆ ಅವರಿಗೆ ಮೊಪೆಡ್ ಮತ್ತಿತರ ದ್ವಿಚಕ್ರ ವಾಹನಗಳನ್ನು ಖರೀದಿಸಲು ಕಡಿಮೆ ಬಡ್ಡಿಯ ದರದಲ್ಲಿ ಸಾಲವನ್ನು ನೀಡುವ ವ್ಯವಸ್ಥೆ ಆಗಬೇಕು.

10. ಅರ್ಹ ದಂಪತಿಗಳು ಒಂದಲ್ಲ ಒಂದು ಕುಟುಂಬ ಯೋಜನೆಯ ಸಾಧನವನ್ನು ಬಳಸಲು ನೆರವಾಗುವಂತೆ ಚಿಕ್ಕ ಕುಟುಂಬದ ಅವಶ್ಯಕತೆಯ ಬಗ್ಗೆ ಶಿಕ್ಷಣ ಕಾರ್ಯಕ್ರಮಗಳನ್ನು ಹೆಚ್ಚು ಮಾಡುವುದಲ್ಲದೆ ಕುಟುಂಬ ಯೋಜನಾ ಕಾರ್ಯದಲ್ಲಿ ಪಾಲ್ಗೊಳ್ಳುವಿಕೆಯನ್ನೂ ಹಾಗೂ ಉತ್ತಮ ಸೇವಾ ಸೌಲಭ್ಯಗಳನ್ನು ಸದೃಢಗೊಳಿಸಬೇಕು.

11. ತಾಯಿಯ ಗರ್ಭದಲ್ಲಿ ಬೆಳೆಯುತ್ತಿರುವ ಮಗು ಹೆಣ್ಣೆಂದು ತಿಳಿದ ಕೂಡಲೇ ಕೆಲವರು ಭ್ರೂಣ ಹತ್ಯೆಯ ದೌರ್ಜನ್ಯವೆಸಗುತ್ತಾರೆ. ಅವರನ್ನು ಹಾಗೂ ಅವರಿಗೆ ಆ ಕಾರ್ಯದಲ್ಲಿ ನೆರವಾಗುವ ಎಲ್ಲರನ್ನೂ ಅಪರಾಧಿಗಳೆಂದು ತಿಳಿದು ಶಿಕ್ಷಿಸಬೇಕು. ಈ ಬಗ್ಗೆ ಇರುವ "Prenatal Diagnostic Tchniques (Regulation and Prevention of Misuse) Act" ಕಾನೂನುಗಳ ಕಟ್ಟುನಿಟ್ಟಿನ ಪಾಲನೆ ಕಡ್ಡಾಯವಾಗುವಂತೆ ಆರೋಗ್ಯ ಇಲಾಖೆ ನಿಗಾ ಇಡುವುದಲ್ಲದೆ, ಕೇವಲ ಒಂದೇ ಹೆಣ್ಣು ಮಗುವನ್ನು ಪಡೆದ ತಂದೆ ತಾಯಿಯರಿಗೆ ತಮ್ಮ ಮಗಳ ಅಭಿವೃದ್ಧಿಗಾಗಿ ಸರ್ಕಾರ ವಿಶೇಷ ಸೌಲಭ್ಯಗಳನ್ನು ನೀಡಲು ಹೆಚ್ಚಿನ ಆದ್ಯತೆ ಕೊಡಬೇಕು.

12. ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆಯು (NIMHANS) ಸಮಾಜದ ಮಟ್ಟದಲ್ಲಿ ಕೈಗೊಂಡಿರುವ ಮಹಿಳೆಯರ ಮಾನಸಿಕ ಆರೋಗ್ಯ ಕಾರ್ಯಕ್ರಮವು ಎಲ್ಲಾ ಜಿಲ್ಲೆಗಳಿಗೂ ವಿಸ್ತಾರವಾಗಬೇಕು. ರಾಜ್ಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆಯ ಸಹಯೋಗದೊಡನೆ ಈ ಬಗ್ಗೆ ಒಂದು ನಿರ್ಧಿಷ್ಟ ಕಾರ್ಯಕ್ರಮವನ್ನು ರೂಪಿಸಬೇಕು.

# 3. ಕೃಷಿ ಮಹಿಳೆಯರು, ಉದ್ಯೋಗ ಮತ್ತು ತರಬೇತಿ

ಕೃಷಿ ಭಾರತದ ಜೀವನಾಡಿಯಾಗಿದ್ದು, ಗ್ರಾಮೀಣ ಜನರು, ಅದರಲ್ಲೂ ಗ್ರಾಮೀಣ ಮಹಿಳೆಯರು ಕೃಷಿ ಕ್ಷೇತ್ರದ ಪ್ರಮುಖ ಅಂಗ. ಶತಮಾನಗಳಿಂದಲೂ ಕೃಷಿಗೂ ಮತ್ತು ಮಹಿಳೆಗೂ ಇರುವ ನಂಟು ಸರ್ವ ವಿಧಿತ. ಕೃಷಿ ಕ್ಷೇತ್ರದ ಶ್ರಮಶಕ್ತಿಯಲ್ಲಿ (Labour Force) ಮಹಿಳೆಯರದ್ದೇ ಸಿಂಹ ಪಾಲು. ಪ್ರತಿ ರಾಷ್ಟ್ರದಲ್ಲೂ ಶ್ರಮಶಕ್ತಿಯಲ್ಲಿ ಮಹಿಳೆಯರ ಪಾಲುಗಾರಿಕೆ ಹೆಚ್ಚಿರುವುದು ಜಾಗತಿಕವಾಗಿ ಒಪ್ಪಿರುವ ಸತ್ಯಾಂಶ. ಗ್ರಾಮೀಣ ಮಹಿಳೆಯರು ಪಶು-ಪಾಲನೆ, ತೋಟಗಾರಿಕೆ, ಕೃಷಿ, ಕೈ ಮಗ್ಗ, ಮೀನುಗಾರಿಕೆ, ಕರಕುಶಲ ವಸ್ತುಗಳ ತಯಾರಿಕೆ ಮುಂತಾದ ಹತ್ತಾರು ರೀತಿಯ ಉದ್ಯೋಗಗಳಲ್ಲಿ ನಿರತರಾಗಿದ್ದರೂ ಸಹ ಅವರ ಶ್ರಮಕ್ಕೆ ಬೆಲೆಯಿಲ್ಲದಿರುವುದು ದುಃಖಕರ ಸಂಗತಿ. ಹೀಗೆಯೇ ಪಟ್ಟಣದ ಮಹಿಳೆಯರು, ಹೂವು, ಹಣ್ಣು, ತರಕಾರಿ, ಬಳೆ ಮಾರಾಟಗಳಂತಹ ಚಿಕ್ಕ ಚಿಕ್ಕ ವ್ಯಾಪಾರಗಳಲ್ಲಿ ಮತ್ತು ಶ್ರೀಮಂತ ಹಾಗೂ ಮಧ್ಯಮ ಕುಟುಂಬಗಳಲ್ಲಿ ಕೆಲಸದಾಳಾಗಿ, ಅಂತೆಯೇ ಗ್ರಾಮಗಳಿಂದ ವಲಸೆ ಬಂದ ಮಹಿಳೆಯರು ಇಟ್ಟಿಗೆ ಮಾಡುವುದು, ರಸ್ತೆ ಮತ್ತು ಕಟ್ಟಡಗಳ ನಿರ್ಮಾಣ ಮುಂತಾದ ಅತ್ಯಂತ ಶ್ರಮವಾದ ಕೆಲಸಗಳಲ್ಲಿ ನಿರತರಾಗಿದ್ದರೂ ಸಹ ಅವರ ವರಮಾನವನ್ನು ಪರಿಗಣಿಸದೆ ಇರುವುದು ಶೋಚನೀಯ ಹಾಗೂ ಇಂತಹ ಶ್ರಮವನ್ನು ಗಣನೆಗೆ ತೆಗೆದುಕೊಳ್ಳಬೇಕಾದ ಅವಶ್ಯಕತೆ ಮಹಿಳಾ ಅಭಿವೃದ್ಧಿಯ ದೃಷ್ಟಿಯಿಂದ ಮಹತ್ವದ್ದಾಗಿದೆ.

ಕೃಷಿ ಕಾರ್ಮಿಕ ಮಹಿಳೆ ಅನಕ್ಷರಸ್ಥಳಾದ್ದರಿಂದ ಸರ್ಕಾರದ ಯಾವುದೇ ಕಾರ್ಯ್ಕಗಳೂ ಅವಳಿಗೆ ತಿಳಿಯದೇ ಹೋಗುತ್ತವೆ. ಅವಳನ್ನು ಸಾಕ್ಷರಳನ್ನಾಗಿ ಮಾಡಿ ಆಧುನಿಕ ಬೇಸಾಯದ ತರಬೇತಿ ನೀಡಿ, ಹಣಕಾಸಿನ ಸಂಸ್ಥೆಗಳನ್ನು ಪರಿಚಯಿಸಿ ಕನಿಷ್ಠ ವೇತನ ಜಾರಿ ಮಾಡಿ ಅವಳ ಸಹಕಾರ ಪಡೆದರೆ ಹಸಿರು ಕ್ರಾಂತಿಗೆ ಹೊಸ ಚೈತನ್ಯ ಬರುವುದರಲ್ಲಿ ಸಂದೇಹವಿಲ್ಲ. ಮಹಿಳೆಯರಿಗೆ ಅನುಕೂಲವಾಗುವಂತಹ ರೇಷ್ಮೆ ಹುಳು ಸಾಕಾಣಿಕೆ, ತೋಟಗಾರಿಕೆ ಮುಂತಾದ ಕೃಷಿ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸೂಕ್ತ ತಿಳುವಳಿಕಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಬೇಕು.

ಉದ್ಯೋಗಸ್ಥ ಮಹಿಳೆಯರಿಗೆ, ಅವರ ಉದ್ಯೋಗಕ್ಕೆ ಸಂಬಂಧಪಟ್ಟಂತೆ ಮದುವೆಯೇ ಒಂದು ಮಾರಕವಾಗಿದೆ. ಹೆಚ್ಚಿನ ಉದ್ಯೋಗಸ್ಥ ಮಹಿಳೆಯರು ತಮ್ಮ ಕುಟುಂಬದ ಹಾಗೂ ಉದ್ಯೋಗದ ಹೊಣೆಗಾರಿಕೆಯ ನಡುವೆ ಸಮತೋಲನವನ್ನು ಕಾಪಾಡಿಕೊಳ್ಳುವುದು ಕಷ್ಟವಾಗಿ ಮದುವೆಯ ನಂತರ ತಮ್ಮ ಉದ್ಯೋಗವನ್ನು ಬಿಡಬೇಕಾದ ಪರಿಸ್ಥಿತಿಗೆ ಒಳಗಾಗಿರುತ್ತಾರೆ ಅಥವಾ ಇಂತಹ ಅನೇಕ ಮಹಿಳೆಯರು ಕುಟುಂಬದಲ್ಲಿ ಹಾಗೂ ತಾವು ಉದ್ಯೋಗಕ್ಕೆ ಇರುವ ಸ್ಥಳಗಳಲ್ಲಿ ಸತತವಾಗಿ ಅನೇಕ ರೀತಿಯ ನಿಂದನೆಗೊಳಗಾಗಿ ಮಾನಸಿಕ ಹಿಂಸೆ ಅನುಭವಿಸುತ್ತಿದ್ದಾರೆ.

ಈ ರೀತಿಯ ಮಹಿಳೆಯರಿಗೆ ಉಪಯೋಗವಾಗುವಂತೆ ಹಾಗೂ ಅವರ ಪ್ರತಿಭೆಯನ್ನು ಸಮಾಜಕ್ಕಾಗಿ ಉಪಯೋಗಿಸಿಕೊಳ್ಳಲು ಅನುಕೂಲವಾಗುವಂತೆ ಪ್ರತಿಭಾವಂತ ಮಹಿಳೆಯರಿಗೆ ಅಲ್ಪಕಾಲಾವಧಿಯ (Part Time) ಉದ್ಯೋಗ ನೀಡಿ ಸಂಬಂಧಪಟ್ಟ ಹುದ್ದೆಗಿರುವ ರಜೆ, ಭವಿಷ್ಯ ನಿಧಿ ಮುಂತಾದ ಎಲ್ಲಾ ಸವಲತ್ತುಗಳನ್ನು ಅರ್ಧದಷ್ಟು ನೀಡುವ ವಿಷಯವನ್ನು ಕೂಲಂಕಷವಾಗಿ ಪರಿಗಣಿಸುವ ಬಗ್ಗೆ ಹೆಚ್ಚಿನ ಸಾಮಾಜಿಕ ಚರ್ಚೆಯಾಗಬೇಕು. ಇದರ ಜೊತೆ ಹೆಣ್ಣು ಮಕ್ಕಳಿಗೆ ಸಾಂಪ್ರಾದಾಯಿಕ ಉದ್ಯೋಗಗಳಲ್ಲದೆ ಕಾಲಕ್ಕೆ ಅನುಗುಣವಾದ ಹೊಸ ಉದ್ಯೋಗಾವಕಾಶಗಳನ್ನು ನಿರ್ಮಿಸುವ ಬಗ್ಗೆ ಸಕಾರಾತ್ಮಕವಾಗಿ ಯೋಚಿಸಬೇಕು.

ರಾಜ್ಯದ ಗ್ರಾಮೀಣ ಕರ್ನಾಟಕದಲ್ಲಿ 58.62 ಮಹಿಳಾ ಕೃಷಿ ಕಾರ್ಮಿಕರಿದ್ದು, ಅವರು ಅತ್ಯಂತ ಗರಿಷ್ಠ

ಶ್ರಮಶಕ್ತಿಯಾಗಿದ್ದಾರೆ. 1994ರಲ್ಲಿ ಕುಲಕರ್ಣಿಯವರ ಅಧ್ಯಯನದ ಪ್ರಕಾರ (National Profile on Women, Health and Development, India P.121) ಕರ್ನಾಟಕ ರಾಜ್ಯದಲ್ಲಿ ಕೃಷಿ ಕ್ಷೇತ್ರದ ಕಾರ್ಯದಲ್ಲಿ ಪುರುಷರ ಪಾಲುಗಾರಿಕೆ ಕಡಿಮೆಯಾಗುತ್ತಿದ್ದು ಸ್ತ್ರೀಯರ ಪಾಲುಗಾರಿಕೆ ಜಾಸ್ತಿಯಾಗುತ್ತಿದೆ. ಇದರ ಪರಿಣಾಮವಾಗಿ ಸ್ತ್ರೀಯರ ಮೇಲೆ ದೈಹಿಕ ಮತ್ತು ಮಾನಸಿಕ ಶ್ರಮವು ಜಾಸ್ತಿಯಾಗುತ್ತಿರುವುದರಿಂದ ಅವರ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುತ್ತಿದೆ. ಇದೇ ರೀತಿ ಅಲೆಮಾರಿ ಜನಾಂಗಗಳ ಮಹಿಳೆಯರೂ ಸಹ ಹೆಚ್ಚು ಕೆಲಸದ ಒತ್ತಡಕ್ಕೆ ಒಳಗಾಗಿರುತ್ತಾರೆ.

1985ರ ಬಾಟ್ಲಿವಾಲರವರ ಅಧ್ಯಯನದ ಪ್ರಕಾರ (National Profile on Women, Health and Development, India P.127) ಕರ್ನಾಟಕ ಹಳ್ಳಿಗಳಲ್ಲಿ ಮಹಿಳೆಯರು ಮನೆ ಮತ್ತು ಕೃಷಿ ಕೆಲಸಗಳಲ್ಲಿ ಹೆಚ್ಚು ಕಾಲಾವಧಿ ಕಾರ್ಯನಿರತರಾಗಿರುತ್ತಾರೆ ಹಾಗೂ ಈ ಕೆಲಸಗಳ ಹೆಚ್ಚಿನ ಭಾಗ ಉರುವಲು, ಪಶು ಆಹಾರ ಮತ್ತು ನೀರನ್ನು ಶೇಖರಿಸುವುದಾಗಿದೆ. ಪುರುಷರು ಋತುಗಳಿಗನುಗುಣವಾಗಿ ಮಾತ್ರ ಕೆಲಸ ಮಾಡಿದರೆ ಮಹಿಳೆಯರು ವರ್ಷ ಪೂರ್ತಿ ಕೆಲಸದಲ್ಲಿ ನಿರತರಾಗಿರುತ್ತಾರೆ. ಇದೇ ಅಧ್ಯಯನದ ಪ್ರಕಾರ ಮಹಿಳೆಯರು ಪ್ರತಿ ದಿನ 2505 ಕ್ಯಾಲೋರಿಗಳಷ್ಟು ಶಕ್ತಿಯನ್ನು ವ್ಯಯ ಮಾಡುವ ಪುರುಷರು 3270 ಕ್ಯಾಲೋರಿಗಳಷ್ಟನ್ನು ಪಡೆಯುತ್ತಾರೆ. ಮಹಿಳೆಯರು ಗರ್ಭಿಣಿಯರಾದಾಗ ಮತ್ತು ಮಗುವಿಗೆ ಎದೆ ಹಾಲು ಕುಡಿಸುತ್ತಿದ್ದಾಗ ಕ್ಯಾಲೋರಿಗಳಲ್ಲಿರುವ ಈ ಅಂತರ ಇನ್ನೂ ಹೆಚ್ಚಾಗುತ್ತದೆ.

ಶರೀಫ್‌ರವರ 1990ರ ಬೆಂಗಳೂರಿನ ಅಧ್ಯಯನದ ಪ್ರಕಾರ (National Profile on Women, Health and Development, India, P.128) ಮಹಿಳೆಯರು ತಮ್ಮ ಮನೆಯಿಂದ ಕೆಲಸ ಮಾಡುವ ಜಾಗಕ್ಕೆ ಹೋಗಿ ಬರುವುದಕ್ಕೆ ಸರಾಸರಿ 1 ಗಂಟೆ 55 ನಿಮಿಷ ಪ್ರಯಾಣ ನಿರತರಾಗಿದ್ದು ಪ್ರತಿದಿನ ಸರಾಸರಿ 9 ಗಂಟೆ 36 ನಿಮಿಷಗಳು ಮನೆಯಿಂದ ಹೊರಗಿರುತ್ತಾರೆ. ಹೀಗಿದ್ದಾಗ್ಯೂ ಅವರ ಕೌಟುಂಬಿಕ ಜವಾಬ್ದಾರಿ ಕಡಿಮೆಯಾಗದು.

1991ರ ಜನಗಣತಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ 5 ರಿಂದ 14 ವರ್ಷದೊಳಗಿನ, 9 ಲಕ್ಷ 70 ಸಾವಿರ ಮಕ್ಕಳು ವಿವಿಧ ಉದ್ಯೋಗಗಳಲ್ಲಿ ನಿರತರಾಗಿದ್ದರೆ, ಇವರಲ್ಲಿ ಹೆಚ್ಚು ಕಡಿಮೆ ಅರ್ಧದಷ್ಟು ಹೆಣ್ಣು ಮಕ್ಕಳಿರುವುದು ಗಮನಿಸಬೇಕಾದ ಸಂಗತಿ. ಇದರಲ್ಲಿ ಹೆಚ್ಚಿನ ಹೆಣ್ಣು ಮಕ್ಕಳು ಅನಕ್ಷರಸ್ಥರಾಗಿದ್ದು ಶಾಶ್ವತವಾಗಿ ಶಿಕ್ಷಣದಿಂದ ವಂಚಿತರಾಗಿದ್ದಾರೆ.

ಕಾನೂನುಬದ್ಧವಾಗಿ ಸಮಾನ ವೇತನ ನೀಡಬೇಕೆಂದಿದ್ದರೂ ಹೆಚ್ಚಿನ ಕಡೆ ಮಹಿಳೆಯರಿಗೆ ಸಮಾನ ವೇತನ ದೊರೆಯುತ್ತಿಲ್ಲ. ಅದರಲ್ಲೂ ಕೃಷಿ ಕ್ಷೇತ್ರದಲ್ಲಿ ಈ ಅಸಮಾನತೆ ಎದ್ದು ಕಾಣುತ್ತಿದೆ. ಎಷ್ಟೋ ಸ್ವಯಂ ಸೇವಾ ಸಂಸ್ಥೆಗಳು ಸಮಾನವೇತನದ ವಿಷಯವಾಗಿ ಕೆಲಸ ಮಾಡುತ್ತಿದ್ದರೂ ಸಹ ಮಹಿಳೆಯರಿಗೆ ನ್ಯಾಯವಾಗಿ ಸಿಗಬೇಕಾದ ಆದಾಯದಿಂದ ವಂಚಿತರಾಗಿದ್ದಾರೆ.

ಜಾಗತಿಕವಾಗಿ ಮಾಹಿತಿ ತಂತ್ರಜ್ಞಾನದಲ್ಲಿ (Information Technology) ಮುಂಚೂಣಿಯಲ್ಲಿರುವ ಕರ್ನಾಟಕ ರಾಜ್ಯವು ಅರ್ಹ ಮಹಿಳೆಯರನ್ನು ಗುರುತಿಸಿ, ಅವರನ್ನು ಮಾಹಿತಿ ತಂತ್ರಜ್ಞಾನದ ಅಭಿವೃದ್ಧಿಯಲ್ಲಿ ಪಾಲ್ಗೊಳ್ಳುವಂತೆ ಮಾಡುವುದು ರಾಜ್ಯ ಹಾಗೂ ಮಹಿಳೆಯರ ಅಭಿವೃದ್ಧಿಯ ದೃಷ್ಟಿಯಿಂದ ಉಚಿತ. ಹೀಗೆಯೇ ಬಾಲಕಿಯರಿಗೆ ಸೂಕ್ತವಾದ ಮಾಹಿತಿ ತಂತ್ರಜ್ಞಾನದಲ್ಲಿ ತರಬೇತಿ ನೀಡುವುದು ಭವಿಷ್ಯದ ದೃಷ್ಟಿಯಿಂದ ಅಗತ್ಯವಿದೆ. ಅದರಲ್ಲೂ ಅಂಗವಿಕಲ ಮಹಿಳೆಯರನ್ನು ಈ ತರಬೇತಿಯ ಕಾರ್ಯಕ್ರಮಕ್ಕಾಗಿ ಪ್ರೋತ್ಸಾಹಿಸಿದರೆ ಅವರಿಗೆ ಉದ್ಯೋಗ ದೊರಕಿಸಿಕೊಳ್ಳಲು ಒಂದು ಉತ್ತಮ ಹಾದಿ ಮಾಡಿಕೊಟ್ಟಂತಾಗುತ್ತದೆ.

**ಸಲಹೆಗಳು:**

1. ರೈತ ಕೂಲಿಕಾರ ಮಹಿಳೆಯರಿಗೆ ಪುರುಷರಿಗಿಂತ ಸರಿಸಮಾನವಾದ ದಿನಗೂಲಿ ಸಿಗದಿರುವ ಪ್ರದೇಶಗಳಲ್ಲಿ, ಕೃಷಿ ವಿಭಾಗದಲ್ಲಿ ಗ್ರಾಮ ಲೆಕ್ಕಾಧಿಕಾರಿಯು ತನ್ನ ಮೇಲಾಧಿಕಾರಿಗೂ, ಕೃಷಿಯೇತರ ವಿಭಾಗದಲ್ಲಿ ಇಂತಹ ವಿಷಯವನ್ನು ಗ್ರಾಮ ಪಂಚಾಯಿತಿ ಕಾರ್ಯದರ್ಶಿಗಳು ತಮ್ಮ ಮೇಲಾಧಿಕಾರಿಗೂ ವರದಿಯನ್ನು ಸಲ್ಲಿಸಿ, ಈ ಅಧಿಕಾರಿಗಳು ಸಂಬಂಧಪಟ್ಟ ಆರೋಪಿಗಳ ವಿರುದ್ಧ ಸೂಕ್ತವಾದ ಕಠಿಣ ಕ್ರಮ ತೆಗೆದುಕೊಳ್ಳಬೇಕು.

2. ಕೃಷಿ ಮಹಿಳೆಯರಿಗಾಗಿ ಮೀಸಲಾಗಿರುವ ತರಬೇತಿ ಮತ್ತು ಸರ್ಕಾರದಿಂದ ಸಿಗುವ ಸಹಾಯ ಧನ ಮತ್ತಿತರ ಸೌಲಭ್ಯಗಳ ಬಗ್ಗೆ ಪ್ರತಿ ಗ್ರಾಮದಲ್ಲೂ ಕೃಷಿ ಮಹಿಳೆಯರಿಗಾಗಿಯೇ ತಿಳುವಳಿಕಾ ಶಿಬಿರಗಳನ್ನು ಏರ್ಪಡಿಸಬೇಕು. ಈ ಬಗ್ಗೆ ಆಕಾಶವಾಣಿ ಹಾಗೂ ದೂರದರ್ಶನಗಳ ಸಹಾಯದಿಂದಲೂ ಕಾರ್ಯಕ್ರಮಗಳನ್ನು ಬಿತ್ತರಿಸಬೇಕು.

   ಮಹಿಳೆಯರ ವ್ಯವಸಾಯೋತ್ಪನ್ನಗಳನ್ನು ಮಾರಾಟ ಮಾಡಲು ಸುಲಭವಾಗುವಂತೆ ಕೃಷಿ ಮಹಿಳೆಯರಿಗೆ ಶೇ.50 ರಷ್ಟು ವ್ಯವಸಾಯೋತ್ಪನ್ನ ಹಾಗೂ ಮಾರಾಟ ಸಮಿತಿ (APMC) ಹಾಗೂ ಇತರ ಕೇಂದ್ರಗಳಲ್ಲಿ ಮೀಸಲಾತಿ ಇಡಬೇಕು.

3. ಗ್ರಾಮಾಂತರ ಪ್ರದೇಶದ ಮಹಿಳೆಯರು ಮುಖ್ಯವಾಗಿ ಕೃಷಿ, ಪಶು ಸಂಗೋಪನೆ, ಖಾದಿ ಮತ್ತು ಗ್ರಾಮೋದ್ಯೋಗ, ಕರಕುಶಲ ಕಲೆ, ನೇಕಾರಿಕೆ, ಅರಣ್ಯ, ರೇಷ್ಮೆ ಮೀನುಗಾರಿಕೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಈ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವ ಅಸಂಘಟಿತ ಮಹಿಳೆಯರ ಕಲ್ಯಾಣಕ್ಕಾಗಿ ಯೋಜನೆಗಳನ್ನು ರೂಪಿಸಿ, ಈ ಕ್ಷೇತ್ರಗಳಲ್ಲಾಗಿರುವ ಹೊಸ ಅವಿಷ್ಕಾರಗಳು, ನವೀನ ತಂತ್ರಜ್ಞಾನಗಳು ಮುಂತಾದ ವಿಷಯಗಳ ಬಗ್ಗೆ ಮಾಹಿತಿ ನೀಡುವುದಲ್ಲದೆ, ಅವರಿಗೆ ಹೊಸ ಹೊಸ ಉದ್ಯೋಗಗಳನ್ನು ಸೃಷ್ಟಿಸಲು ಇರುವ ಅವಕಾಶಗಳನ್ನು ಶೋಧನೆ ಮಾಡಬೇಕು. ಹೀಗೆ ಶೋಧನೆ ಮಾಡಿದ ಹೊಸ ಉದ್ಯೋಗಾವಕಾಶಗಳ ಬಗ್ಗೆ ತರಬೇತಿ ಮಾರ್ಗದರ್ಶನ ನೀಡಲು ತಾಲ್ಲೂಕು ಮಟ್ಟದಲ್ಲಿ ಗ್ರಾಮೀಣ ಮಹಿಳಾ ಉದ್ಯೋಗ ಸಹಾಯ ಘಟಕ ಆರಂಭಿಸಬೇಕು.

4. ಹೊಲಿಗೆ, ಕಸೂತಿ, ಬೆರಳಚ್ಚು, ಶೀಘ್ರಲಿಪಿ, ನರ್ಸಿಂಗ್ ಮುಂತಾದ ಸಾಂಪ್ರದಾಯಿಕವಾಗಿ ಹೆಣ್ಣು ಮಕ್ಕಳಿಗೆಂದೇ ಮೀಸಲಾಗಿಟ್ಟಿರುವ ತರಬೇತಿಗಳನ್ನು ಮೀರಿ, ಗೋಡೆ ಕಟ್ಟುವುದು, ಗಿಲಾವು ಮಾಡುವುದು ಮುಂತಾದ ಪುರುಷ ಪ್ರಧಾನ ಉದ್ಯಮಗಳಲ್ಲಲ್ಲದೆ ಹೊಸ ಹೊಸ ತಾಂತ್ರಿಕ ಉದ್ಯಮಗಳಲ್ಲೂ ಹಾಗೂ ಸಾಂಪ್ರದಾಯಿಕವಾಗಿ ತಯಾರಿಸುತ್ತಿರುವ ಉಪ್ಪಿನಕಾಯಿ, ಹಪ್ಪಳ ಮುಂತಾದ ಗೃಹ ಉದ್ಯಮಗಳಲ್ಲೂ ಸಹ ಹೆಣ್ಣು ಮಕ್ಕಳಿಗೆ ಹೊಸ ಅವಿಷ್ಕಾರಗಳ ಬಗ್ಗೆ ತರಬೇತಿ ನೀಡಬೇಕು. ಈ ಬಗ್ಗೆ ಜನರಿಗೆ ಬೇಕಾಗುವ ವಸ್ತುಗಳ ವಿಷಯವಾಗಿಯೂ ಮಾರುಕಟ್ಟೆಯ ಅಧ್ಯಯನವೂ ಆಗಬೇಕು.

5. ಹೆಸರನ್ನು ನೋಂದಣಿ ಮಾಡುವಾಗ ಪ್ರತಿ ಉದ್ಯೋಗ ಮತ್ತು ತರಬೇತಿ ಕೇಂದ್ರಗಳು (Employment and Training Exchange) ಹೆಣ್ಣು ಮಕ್ಕಳಿಗೆ ಪ್ರತ್ಯೇಕವಾದ ಒಂದು ಪಟ್ಟಿಯನ್ನು ತಯಾರಿಸಿ, ಮಹಿಳೆಯರಿಗೂ ಹೆಚ್ಚಿನ ಉದ್ಯೋಗಾವಕಾಶಕ್ಕೆ ಅನುವು ಮಾಡಿಕೊಡುವುದಲ್ಲದೇ ಮಹಿಳೆಯರಿಗಾಗಿಯೇ ಪ್ರತ್ಯೇಕವಾದ ಉದ್ಯೋಗ ಮತ್ತು ತರಬೇತಿ ಕೇಂದ್ರವೊಂದನ್ನು ರಾಜ್ಯದ ಎಲ್ಲಾ ವಿಭಾಗೀಯ ಕೇಂದ್ರಗಳಲ್ಲಿ ಕಾಲಕ್ರಮೇಣ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ರಚಿತವಾಗಬೇಕು.

6. ಮಹಿಳೆಯರು ತಮ್ಮ ಕುಟುಂಬದ ಹಾಗೂ ಉದ್ಯೋಗದ ಹೊಣೆಗಾರಿಕೆಯ ನಡುವೆ ಸಮತೋಲನವನ್ನು ಕಾಪಾಡಿಕೊಳ್ಳುವ ಸಲುವಾಗಿ ಅಲ್ಪಕಾಲಾವಧಿಯ (Part Time) ಉದ್ಯೋಗ ನೀಡಿ ಸಂಬಂಧಪಟ್ಟ ಹುದ್ದೆಗೆ ಇರುವ ರಜೆ, ಭವಿಷ್ಯ ನಿಧಿ ಮುಂತಾದ ಎಲ್ಲಾ ಸವಲತ್ತುಗಳನ್ನು ಅರ್ಧದಷ್ಟು ನೀಡಬೇಕು. ಈ ಬಗ್ಗೆ ಉದ್ಯೋಗಕ್ಕೆ ಸಂಬಂಧಪಟ್ಟ ಸರ್ಕಾರದ

ನೀತಿ ನಿಯಮಗಳನ್ನು ಬದಲಿಸಬೇಕು. ಈ ಸೌಲಭ್ಯಗಳು ಖಾಸಗಿ ಹಾಗೂ ಇನ್ನಿತರ ಕಛೇರಿಗಳಲ್ಲಿ ದೊರೆಯುವಂತಾಗಲು ನೀತಿ ನಿಯಮಗಳ ಬದಲಾವಣೆಯಾಗಬೇಕು.

7. ಮಾಹಿತಿ ತಂತ್ರಜ್ಞಾನ (Information Technology)ದಲ್ಲಿ ಮಹಿಳೆಯ ಶಿಕ್ಷಣಕ್ಕೆ ಅನುಗುಣವಾಗಿ ತರಬೇತಿ ನೀಡಿ, ತರಬೇತಿ ನಂತರ ಸೂಕ್ತ ಉದ್ಯೋಗವನ್ನು ಪಡೆದುಕೊಳ್ಳಲು ಮಹಿಳೆಯರಿಗೆ, ವಿಶೇಷವಾಗಿ ಅಂಗವಿಕಲ ಮಹಿಳೆಯರಿಗೆ ನೆರವು ನೀಡಬೇಕು.

   ಮಾಹಿತಿ ತಂತ್ರಜ್ಞಾನದಲ್ಲಿ ವಿಶ್ವದಲ್ಲೇ ಮುಂಚೂಣಿಯಲ್ಲಿರುವ ರಾಜ್ಯದ ಹಿರಿಯ ಸಂಸ್ಥೆಗಳಾದ ವಿಪ್ರೊ, ಇನ್‌ಫೋಸಿಸ್ ಮುಂತಾದ ಸಂಸ್ಥೆಗಳೊಡನೆ ರಾಜ್ಯ ಸರ್ಕಾರವು ಈ ಬಗ್ಗೆ ಸಕ್ರೀಯವಾಗಿ ಚರ್ಚಿಸಿ ಸೂಕ್ತ ಕಾರ್ಯಕ್ರಮಗಳನ್ನು ನಿರೂಪಿಸಬೇಕು..

# 4. ಮಹಿಳಾ ಆರ್ಥಿಕ ಅಭಿವೃದ್ಧಿ

ಕರ್ನಾಟಕ ರಾಜ್ಯದಲ್ಲಿ 2,20,25,284 (1991) ಹೆಚ್ಚು ಮಹಿಳೆಯರಿದ್ದು ಅವರ ಅಭಿವೃದ್ಧಿಗಾಗಿ ಕೇವಲ ಮೂರು ಕೋಟಿ ವಾರ್ಷಿಕ ಹಣ ಬಿಡುಗಡೆಯಾಗುತ್ತಿರುವುದರಿಂದ ಮಹಿಳಾ ಅಭಿವೃದ್ಧಿ ನಿರೀಕ್ಷಿತ ಮಟ್ಟದಲ್ಲಿ ಆಗಲು ಸಾಧ್ಯವಿಲ್ಲ. ಮಹಿಳೆಯರ ಅಭಿವೃದ್ಧಿಗಾಗಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲದೆ, ಮಹಿಳಾ ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯ ಮಹಿಳಾ ಆಯೋಗ, ಶೈಕ್ಷಣಿಕ ಇಲಾಖೆ, ಆರೋಗ್ಯ ಇಲಾಖೆ ಹಾಗೂ ಇನ್ನಿತರ 23 ಇಲಾಖೆಗಳೂ ಸಹ ಕಾರ್ಯಕ್ರಮಗಳನ್ನು ಕಾರ್ಯಗತ ಮಾಡುತ್ತಿದ್ದು, ಈ ಎಲ್ಲಾ ಕಾರ್ಯಕ್ರಮಗಳ ಸಂಯೋಜನೆ ಆಗಬೇಕಾದ ಅವಶ್ಯಕತೆ ಇದೆ.

ಮಹಿಳಾ ಮತ್ತು ಮಕ್ಕಳ ಇಲಾಖೆಯಿಂದ ಹಾಗೂ ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಸಲಹಾ ಮಂಡಳಿ ಮುಂತಾದ ಸಂಸ್ಥೆಗಳು ಮಹಿಳೆಯರಿಗೆ ವೃತ್ತಿ ತರಬೇತಿ ನೀಡುತ್ತಿದ್ದು ತರಬೇತಿಯ ನಂತರ ಅವರಿಗೆ ನಬಾರ್ಡ್, ರಾಷ್ಟ್ರೀಯ ಮಹಿಳಾ ಕೋಶ, ಗ್ರಾಮೀಣ ಹಾಗೂ ರಾಷ್ಟ್ರೀಕೃತ ಬ್ಯಾಂಕ್‌ಗಳು, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳ ಮೂಲಕ ಸ್ವಯಂ ಉದ್ಯೋಗಕ್ಕಾಗಿ ಆರ್ಥಿಕ ಸಹಾಯ ನೀಡಲಾಗುತ್ತಿದೆ. ಆದರೆ ಹೀಗೆ ನೀಡುತ್ತಿರುವ ಆರ್ಥಿಕ ಸಹಾಯದ ಮೊಬಲಗು ಇಂದಿನ ಮಾರುಕಟ್ಟೆಯ ದೃಷ್ಟಿಯಿಂದ ಅತಿ ಕಡಿಮೆ ಎನಿಸಿದೆ. ಹೀಗಾಗಿ ಅನೇಕ ಚಿಕ್ಕ ಚಿಕ್ಕ ಉದ್ಯೋಗಗಳಿಂದ ಮಹಿಳೆಯರಿಗೆ ಸಿಗುತ್ತಿರುವ ಆದಾಯ ಮಹಿಳಾ ಆರ್ಥಿಕ ಸ್ವಾವಲಂಬನೆಗೆ ಪೂರ್ಣ ಸಹಕಾರಿಯಾಗಿಲ್ಲ.

ಮಹಿಳಾ ಸಹಕಾರಿ ಸಂಘಗಳ ಸಂಖ್ಯೆ ವೃದ್ಧಿಯಾಗುತ್ತಿರುವುದು ಸಂತೋಷದ ವಿಷಯ. ಇದಲ್ಲದೆ, ಮಹಿಳಾ ಬ್ಯಾಂಕುಗಳು, ಹಾಲು ಉತ್ಪಾದಕ ಸಂಘಗಳು, ಮಹಿಳೆಯರ ಅಭಿವೃದ್ಧಿಗಾಗಿ ಕಾರ್ಯನಿರತವಾಗಿವೆ. ಈ ಕ್ಷೇತ್ರಗಳಲ್ಲಿ ಅನುಭವವಿರುವ ಮಹಿಳೆಯರನ್ನು ಹೆಚ್ಚು ಜಾಗೃತಗೊಳಿಸಿ ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಸಬಲರಾಗಲು ಇನ್ನೂ ಹೆಚ್ಚು ಕಾರ್ಯಕ್ರಮಗಳಾಗಬೇಕು ಹಾಗೂ ಇಂತಹ ಮಹಿಳಾ ಆರ್ಥಿಕ ಸಂಘ ಸಂಸ್ಥೆಗಳ ಸ್ಥಳೀಯ ಜಾಲವೊಂದು (Local Net Work) ನಿರ್ಮಾಣವಾಗಬೇಕು. ಇದಲ್ಲದೆ, ಸಹಕಾರಿ ಕ್ಷೇತ್ರದಲ್ಲಿರುವ ಎಲ್ಲಾ ಹುದ್ದೆಗಳಲ್ಲೂ ಮಹಿಳಾ ಪ್ರಾತಿನಿಧ್ಯವಿದ್ದರೆ, ಸಹಕಾರಿ ಕ್ಷೇತ್ರದ ಮೂಲಕ ಮಹಿಳೆಯರ ಅಭಿವೃದ್ಧಿಗೆ ಹೆಚ್ಚು ಒತ್ತು ಬರುತ್ತದೆ.

ಜಾಗೃತ ಶಿಬಿರಗಳ ಮೂಲಕ ಮಹಿಳೆಯರಿಗೆ ವಿವಿಧ ಸ್ವಯಂ ಸೇವಾ ಉದ್ಯೋಗಗಳು, ಅವುಗಳ ಮಾರುಕಟ್ಟೆ, ಇವುಗಳಿಗಿರುವ ಸವಲತ್ತು ಮುಂತಾದವುಗಳ ಬಗ್ಗೆ ಮಾಹಿತಿ ನೀಡುವ ಕಾರ್ಯಕ್ರಮಗಳು ಕರ್ನಾಟಕದ ವಿವಿಧ ಕಡೆಗಳಲ್ಲಿ ನಡೆಯುತ್ತಿವೆ. ಆದಾಗ್ಯೂ ಈ ಬಗ್ಗೆ ರಾಜ್ಯಾದ್ಯಂತ, ಅದರಲ್ಲೂ ಹಿಂದುಳಿದ ಪ್ರದೇಶಗಳಲ್ಲಿ ಇನ್ನೂ ಹೆಚ್ಚಿನ ಕಾರ್ಯಕ್ರಮಗಳಾಗಬೇಕು. ಪ್ರಮುಖವಾಗಿ ಗುಡಿ ಕೈಗಾರಿಕೆಗಳನ್ನು ಆರ್ಥಿಕವಾಗಿ ಹೇಗೆ ಪ್ರಬಲಗೊಳಿಸಿಕೊಳ್ಳಬಹುದು ಎಂಬುದರ ಬಗ್ಗೆ ಮಹಿಳಾ ಸ್ವಯಂ ಸೇವಾ ಸಂಸ್ಥೆಗಳು ಮತ್ತು ಇತರ ಸಂಘಟನೆಗಳು ಕಾರ್ಯಕೈಗೊಳ್ಳುವಂತೆ ಸರ್ಕಾರ ನೆರವಾಗುವ ಅವಶ್ಯಕತೆ ಇದೆ ಹಾಗೂ ನವದೆಹಲಿಯಲ್ಲಿರುವ 'ಡೆಲ್ಲಿ ಹಾಟ್' ನಂತಹ ಮತ್ತು CAPART ನ 'ಗ್ರಾಮಶ್ರೀ' ಯಂತಹ ತಾತ್ಕಾಲಿಕ ಮಾರಾಟ ಮಳಿಗೆಗಳನ್ನು ಹೆಚ್ಚು ಜನರು ಓಡಾಡುವ ಕಡೆ ಸ್ಥಾಪಿಸಿ, ರಾಜ್ಯದ ಮಹಿಳೆಯರು ತಯಾರಿಸಿದ ಕರಕುಶಲ ವಸ್ತುಗಳನ್ನು ಮಾರಾಟ ಮಾಡಲು ಅನುವು ಮಾಡಿಕೊಡಬೇಕು. ಈ ಪ್ರಕ್ರಿಯೆ ಪ್ರಬಲವಾದಷ್ಟೂ ದಲ್ಲಾಳಿಗಳ ಹಾವಳಿ ಕಡಿಮೆಯಾಗಿ ಮಹಿಳೆಯರಿಗೆ ಹೆಚ್ಚಿನ ಆದಾಯ ತರುತ್ತದೆ.

ಸರ್ಕಾರಿ ಕ್ಷೇತ್ರದಲ್ಲಿ ಉದ್ಯೋಗಗಳ ಸಂಖ್ಯೆ ಕಡಿಮೆಯಾಗುತ್ತಿರುವುದರಿಂದ ಹಾಗೂ ಉದ್ಯೋಗಗಳ

ಸಂಖ್ಯೆಯನ್ನು ಕಡಿಮೆ ಮಾಡಬೇಕೆಂಬ ಸಲಹೆಗಳು ಸರ್ಕಾರಕ್ಕೆ ಬರುತ್ತಿರುವುದರಿಂದ ಮಹಿಳೆಯರನ್ನು ಸರ್ಕಾರಿ ಉದ್ಯೋಗಕ್ಕೆ ಮಾತ್ರ ತಯಾರು ಮಾಡದೇ, ಸರ್ಕಾರೇತರ ಮತ್ತು ಸ್ವಯಂ ಉದ್ಯೋಗಕ್ಕೆ ತಯಾರು ಮಾಡಬೇಕಾಗಿದೆ. ಕರ್ನಾಟಕವನ್ನು ಒಳಗೊಂಡಂತೆ ದಕ್ಷಿಣದ ರಾಜ್ಯಗಳಲ್ಲಿ ಸರ್ಕಾರೇತರ ಉದ್ಯೋಗಗಳಲ್ಲೂ ಮಹಿಳೆಯರ ಸಂಖ್ಯೆ ಶೇಕಡ 47.6 (National Profile on Women, Health and Development, India, P.122) ಇರುವುದು ಪ್ರಗತಿಯ ದ್ಯೋತಕ. ಆರ್ಥಿಕ ಅಥವಾ ಮೂಲಭೂತ ಸೌಲಭ್ಯಗಳಾದ ಭೂಮಿ, ನೀರು ಮತ್ತಿತರ ಸೌಲಭ್ಯಗಳನ್ನು ಸರ್ಕಾರದಿಂದ ಪಡೆಯುವ ಎಲ್ಲಾ ಖಾಸಗಿ ಕೈಗಾರಿಕಾ ಮತ್ತು ಇತರ ಸಂಘ ಸಂಸ್ಥೆಗಳು ಶೇ.50ರಷ್ಟು ಉದ್ಯೋಗವನ್ನು ಮಹಿಳೆಯರಿಗೆ ಕಾನೂನುಬದ್ಧವಾಗಿ ಮೀಸಲಿಡುವಂತೆ ಸರ್ಕಾರದ ಸಹಾಯ ಧನ ನಿಯಮಗಳಲ್ಲಿ ಬದಲಾವಣೆಗಳನ್ನು ಮಾಡಬೇಕು. ಈ ಪರಿಸ್ಥಿತಿಯ ಲಾಭ ಪಡೆದು ಕರ್ನಾಟಕ ರಾಜ್ಯವು ಸರ್ಕಾರೇತರ ಸಂಘ-ಸಂಸ್ಥೆಗಳಲ್ಲಿ ಮಹಿಳೆಯರಿಗೆ ಇನ್ನೂ ಹೆಚ್ಚಿನ ಆದ್ಯತೆ ನೀಡುವಂತೆ ಪ್ರೋತ್ಸಾಹಿಸುವುದು ಮಹಿಳಾ ಅಭಿವೃದ್ಧಿಯಲ್ಲಿ ಒಂದು ಮುನ್ನಡೆಯಾಗುವುದು. ಹೀಗಯೆ ಸ್ವಯಂ ಸೇವಾ ಉದ್ಯೋಗ ಕೈಗೊಳ್ಳುವ ಮಹಿಳೆಯರಿಗೆ ಮಾನಸಿಕವಾಗಿ ಹಾಗೂ ಆರ್ಥಿಕವಾಗಿ ಸಹಾಯ ನೀಡುವುದು ರಾಜ್ಯದ ಅಭಿವೃದ್ಧಿಯ ದೃಷ್ಟಿಯಿಂದ ಒಳ್ಳೆಯದು.

ಸರ್ಕಾರವು ಬಡತನದ ರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ನೀಡುತ್ತಿರುವ ಮನೆ, ಜಾಗ ಮುಂತಾದವುಗಳು ಗಂಡ-ಹೆಂಡಿರ ಇಬ್ಬರ ಹೆಸರಿನಲ್ಲೂ (Joint Patta) ಇರುವಂತೆ ನೀಡುತ್ತಿರುವುದು ಅಭಿವೃದ್ಧಿಯ ಸಂಕೇತ. ಹೀಗೆಯೇ ಎಲ್ಲಾ ವರ್ಗಗಳಲ್ಲಿಯೂ ಒಂದು ಕುಟುಂಬದ ಸ್ಥಿರ ಆಸ್ತಿಯ ಗಂಡ-ಹೆಂಡಿರ ಇಬ್ಬರ ಹೆಸರಿನಲ್ಲೂ ಇರುವಂತೆ ಕಾನೂನಿನಲ್ಲಿ ಸೂಕ್ತ ಬದಲಾವಣೆ ಆಗಬೇಕು. ತಂದೆಯ ಆಸ್ತಿಯಲ್ಲಿ ಗಂಡು ಮತ್ತು ಹೆಣ್ಣು ಮಕ್ಕಳಿಬ್ಬರಿಗೂ ಸಮಾನ ಪಾಲು ಆಗಬೇಕೆಂಬ ಇರುವ ಕಾನೂನಿನ ಅನುಷ್ಠಾನ ಪ್ರಭಾವಶಾಲಿಯಾಗಿ ಆಗಬೇಕು.

ಸಾಂಪ್ರದಾಯಿಕವಾಗಿ ಹೆಣ್ಣು ಮಕ್ಕಳಿಗೆ ಆಸ್ತಿ ಇರುವುದಿಲ್ಲ. ಹೀಗಾಗಿ ಅವರಿಗೆ ಬ್ಯಾಂಕ್ ಮತ್ತು ಇತರ ಸಂಸ್ಥೆಗಳಿಂದ ಸಾಲ ದೊರಕುವುದಿಲ್ಲ. ಇದರ ಪರಿಣಾಮವಾಗಿ ಮಹಿಳೆಯರು ಹೆಚ್ಚು ಬಡ್ಡಿ ಕೊಟ್ಟು ವಿವಿಧ ಇತರ ಮೂಲಗಳಿಂದ ಸಾಲ ಪಡೆಯುತ್ತಾರೆ ಹಾಗೂ ಇದರ ಫಲವಾಗಿ ಶಾಶ್ವತವಾಗಿ ಸಾಲಗಾರರಾಗಿರುತ್ತಾರೆ. ಈ ವಿಷವೃತ್ತವನ್ನು ಸಡಿಲಗೊಳಿಸಲು ಬ್ಯಾಂಕ್‌ಗಳು ನೀಡುವ ಸಾಲದ ಮೇಲೆ ಮಹಿಳೆಯರಿಗೆ ಬಡ್ಡಿಯ ದರದಲ್ಲಿ ಶೇಕಡ ಒಂದರಷ್ಟನ್ನು ಕಡಿಮೆ ಮಾಡುವುದಲ್ಲದೆ ಇತರ ಸಾಲನೀಡುವ ನಿಭಂದನೆಗಳು ಸರಳವಾಗಬೇಕು ಹಾಗೂ ಮಹಿಳಾ ಸಹಕಾರಿ ಬ್ಯಾಂಕುಗಳು ವಿಸ್ತಾರಗೊಳ್ಳಬೇಕಾದ ಅವಶ್ಯಕತ ಇದೆ.

**ಸಲಹೆಗಳು:**

1. ಮಹಿಳೆಯರ ಆರ್ಥಿಕ ಅಭಿವೃದ್ಧಿಗಾಗಿ ಸಾಲ ನೀಡುವ ಪದ್ಧತಿ ಮತ್ತು ಕ್ರಿಯೆ ಸರಳವಾಗಬೇಕು ಮತ್ತು ಮಹಿಳೆಯರು ಸಾಲಕ್ಕಾಗಿ ಹತ್ತಾರು ಕಡೆ ಓಡಾಡುವುದು ಕಡಿಮೆಯಾಗಿ ಎಲ್ಲಾ ಮಾಹಿತಿ ಹಾಗೂ ಸೌಲಭ್ಯಗಳು ಚಿಕ್ಕ ಮತ್ತು ಮಧ್ಯಮ ವರ್ಗದ ಉದ್ಯಮಿಗಳಿಗೆ ಒಂದೇ ಕಡೆ ಸಿಗುವಂತೆ ಸಿಂಗಲ್ ವಿಂಡೋ ಪದ್ಧತಿ (Single Window System) ಪ್ರಾರಂಭವಾಗಬೇಕು.
2. ಮಹಿಳಾ ಸಹಕಾರಿ ಸಂಘ ಹಾಗೂ ಮಹಿಳಾ ಸಹಕಾರಿ ಬ್ಯಾಂಕ್‌ಗಳನ್ನು ಸಶಕ್ತಗೊಳಿಸುವುದಲ್ಲದೆ ಇವುಗಳ ವಿಸ್ತರಣೆ ಆಗಬೇಕು. ಹಾಗೂ ಸಹಕಾರಿ ಕ್ಷೇತ್ರದಲ್ಲಿ ಎಲ್ಲಾ ಸಂಘ ಸಂಸ್ಥೆಗಳು ತಮ್ಮಲ್ಲಿರುವ ಉದ್ಯೋಗಗಳಲ್ಲಿ ಶೇಕಡ 50ರಷ್ಟನ್ನು ಮಹಿಳೆಯರಿಗಾಗಿ ಮೀಸಲಿಡುವುದಲ್ಲದೆ ಪ್ರತಿ ತಾಲ್ಲೂಕಿನಲ್ಲೂ ರೈತ ಮಹಿಳಾ ಸಹಕಾರಿ ಸಂಸ್ಥೆಗಳನ್ನು ಸ್ಥಾಪಿಸುವಂತೆ ಯೋಜನೆಯೊಂದನ್ನು ರೂಪಿಸಬೇಕು.
3. ಸರ್ಕಾರೇತರ ಮತ್ತು ಸ್ವಯಂ ಉದ್ಯೋಗಗಳಿಗಾಗಿ ಮಹಿಳೆಯರಿಗೆ ತರಬೇತಿ ನೀಡಬೇಕು. ಇದಕ್ಕಾಗಿ

ಈಗಾಗಲೇ ಮಹಿಳೆಯರಿಗೆ ತರಬೇತಿ ನೀಡುತ್ತಿರುವ ಸಂಸ್ಥೆಗಳೊಡನೆ ಚರ್ಚಿಸಿ ತರಬೇತಿಯಲ್ಲಿ ಸೂಕ್ತ ಬದಲಾವಣೆಯನ್ನು ಮಾಡಬೇಕಲ್ಲದೆ ಸ್ವಯಂ ಉದ್ಯೋಗ ಕೈಗೊಳ್ಳಲು ಇಚ್ಛಿಸುವ ಮಹಿಳೆಯರಿಗೆ ಸರ್ಕಾರದ ಇಲಾಖೆಗಳು ಸೂಕ್ತ ಮಾರ್ಗದರ್ಶನ ನೀಡಬೇಕು ಮತ್ತು ಬ್ಯಾಂಕುಗಳು ಆರ್ಥಿಕ ಸಹಾಯ ಒದಗಿಸಬೇಕು.

4. ಗ್ರಾಮೀಣ ಮಹಿಳೆಯರ ಶಿಕ್ಷಣ ಮಟ್ಟಕ್ಕೆ, ಸ್ಥಳೀಯವಾಗಿ ದೊರಕುವ ಕಚ್ಚಾ ವಸ್ತುಗಳಿಗೆ ಹಾಗೂ ಸ್ಥಳೀಯ ಬೇಡಿಕೆಗೆ ಅನುಸಾರವಾಗಿ, ಅವರ ಆರ್ಥಿಕ ಅಭಿವೃದ್ಧಿಗಾಗಿ ವೃತ್ತಿ ಪರ ತರಬೇತಿಯನ್ನು ನೀಡುವುದಲ್ಲದೆ ಮಹಿಳೆಯರ ಆರ್ಥಿಕ ಅಭಿವೃದ್ಧಿಗಾಗಿ ಮಹಿಳಾ ಸ್ವಯಂ ಸೇವಾ ಸಂಸ್ಥೆಗಳ ಒಂದು ಸ್ಥಳೀಯ ಜಾಲದ (Local Network) ಮೂಲಕ ಮಹಿಳೆಯರು ತಯಾರಿಸಿದ ಕರಕುಶಲ ವಸ್ತುಗಳನ್ನು ಮಾರಾಟ ಮಾಡಲು ಪ್ರಮುಖ ಸ್ಥಳಗಳಲ್ಲಿ ಹಾಗೂ ಹೆಚ್ಚು ಜನರು ಓಡಾಡುವ ಸ್ಥಳಗಳಲ್ಲಿ ಖಾಯಂ ಮಳಿಗೆಗಳನ್ನು ಹಾಕಿ, ಬೇರೆ ಬೇರೆ ಮಹಿಳೆಯರು ಅಲ್ಲಿ ತಾತ್ಕಾಲಿಕವಾಗಿ ತಾವು ತಯಾರಿಸಿದ ವಸ್ತುಗಳನ್ನು ಪ್ರದರ್ಶನ ಮತ್ತು ಮಾರಾಟ ಮಾಡಲು ಅವಕಾಶ ಮಾಡಿಕೊಡುವುದಲ್ಲದೆ, ಮಹಿಳಾ ಅಭಿವೃದ್ಧಿ ನಿಗಮವು ಈ ಬಗ್ಗೆ ನಿಗದಿ ಮಾಡಿರುವ ಹಣದ ಮೊತ್ತವನ್ನು ಹೆಚ್ಚಿಸಬೇಕು. ಕ್ರಮೇಣ ಈ ವ್ಯವಸ್ಥೆಯನ್ನು ಜಿಲ್ಲಾ ಕೇಂದ್ರಗಳಿಂದ ತಾಲ್ಲೂಕು ಮಟ್ಟಗಳಿಗೂ ವಿಸ್ತರಿಸಬೇಕು. ಈ ರೀತಿಯ ವೃತ್ತಿಪರ ತರಬೇತಿಯಲ್ಲಿ ವ್ಯವಸ್ಥಾಪನೆ ಮತ್ತು ಮಾರಾಟಕ್ಕೆ ಸಂಬಂಧಪಟ್ಟ ಕುಶಲತೆಗಳನ್ನೂ ಉಂಟು ಮಾಡಬೇಕು.

5. ವಿದ್ಯಾವಂತ ಮಹಿಳೆಯರು ಗ್ರಾಮ ಬಿಟ್ಟು ನಗರಗಳಿಗೆ ಬರುತ್ತಿದ್ದಾರೆ. ಇದರಿಂದ ಗ್ರಾಮಗಳ ಅಭಿವೃದ್ಧಿಯಾಗುವುದು ಕಷ್ಟವಾಗುತ್ತದೆ. ಆದ್ದರಿಂದ ಅಂತಹ ಮಹಿಳೆಯರಿಗೆ ಗ್ರಾಮಗಳಲ್ಲಿ ಸೂಕ್ತ ಕಾರ್ಯಕ್ರಮಗಳನ್ನು ರೂಪಿಸಿ, ಅವರ ಗ್ರಾಮದ ಅಭಿವೃದ್ಧಿಗೆ ಸಹಕಾರಿಗಳಾಗುವಂತೆ ಪ್ರೇರೇಪಿಸಬೇಕು.

6. ತಮ್ಮ ಆರ್ಥಿಕ ಸ್ವಾವಲಂಬನೆಯನ್ನು ಬೆಳೆಸಿಕೊಳ್ಳುವ ಸಲುವಾಗಿ ಮಹಿಳೆಯರಿಗೆ ಅನುಕೂಲವಾಗುವಂತೆ, ಕುಟುಂಬದ ಸ್ಥಿರ ಆಸ್ತಿಯ ಗಂಡ-ಹೆಂಡಿರ ಇಬ್ಬರ ಹೆಸರಿನಲ್ಲಿಯೂ ಇರುವಂತೆ ಕಾನೂನಿನಲ್ಲಿ ಬದಲಾವಣೆ ಆಗಬೇಕು. ಈ ಬದಲಾವಣೆ ಮಾಡುವಂತಹ ಪ್ರಕ್ರಿಯೆಯನ್ನು ಸರ್ಕಾರ ಆದಷ್ಟು ಬೇಗನೆ ಪ್ರಾರಂಭಿಸಬೇಕು ಹಾಗೂ ಕಾನೂನಿನ ಪ್ರಕಾರ ಹೆಣ್ಣು ಮಕ್ಕಳಿಗೆ ಕುಟುಂಬದ ಆಸ್ತಿಯಲ್ಲಿ ಸಮಪಾಲಿರಬೇಕೆಂದು ಇರುವ ಕಾನೂನನ್ನು ಪ್ರಭಾವಯುತವಾಗಿ ಅನುಷ್ಠಾನಗೊಳಿಸಬೇಕು. ಈ ದಿಕ್ಕಿನಲ್ಲಿ ಸಮಾಜದಲ್ಲಿ ಮನ ಪರಿವರ್ತನೆಯಾಗುವಂತಹ ಶೈಕ್ಷಣಿಕ ಕಾರ್ಯಕ್ರಮಗಳು ರೂಪುಗೊಳ್ಳಬೇಕು. ಸರ್ಕಾರದ ಕಾರ್ಯಾಂಗ ಹಾಗೂ ನ್ಯಾಯಾಂಗಗಳೆರಡು ಇದಕ್ಕೆ ಸೂಕ್ತ ವಾತವರಣವನ್ನುಂಟು ಮಾಡಬೇಕು.

7. ಪ್ರತಿಭಾನ್ವಿತ ಮಹಿಳೆಯರಿಗೆ ಕೈಗಾರಿಕೆಗಳನ್ನು ಸ್ಥಾಪಿಸಲು ಅನುಕೂಲವಾಗುವಂತೆ ಕರ್ನಾಟಕ ರಾಜ್ಯ ಅಭಿವೃದ್ಧಿ ನಿಗಮ (Karnakata Industrial Area Development Board)ದಲ್ಲಿ ಕೈಗಾರಿಕಾ ಮಳಿಗೆಗಳಲ್ಲಿ ಶೇಕಡ 50ರಷ್ಟು ಮೀಸಲಾತಿ ಇಡುವುದಲ್ಲದೆ ಸರ್ಕಾರದಿಂದ ಸಹಾಯಧನ ಪಡೆದ ಸಾರ್ವಜನಿಕ STD ಬೂತ್‌ಗಳನ್ನು ನೀಡುವಾಗ ಶೇಕಡ 50ರಷ್ಟನ್ನು ಅಂಗವಿಕಲ ಮಹಿಳೆಯರಿಗೆ ಮೀಸಲಾಗಿಡಬೇಕು.

# 5. ಮಹಿಳೆಯರ ಮೇಲೆ ದೌರ್ಜನ್ಯ ಮತ್ತು ಅತ್ಯಾಚಾರ

ಭಾರತವು ಸೇರಿದಂತೆ ಎಲ್ಲಾ ರಾಷ್ಟ್ರಗಳಲ್ಲೂ ಮಹಿಳಾ ಆಂದೋಲನದ ಪ್ರಮುಖ ಅಂಶಗಳೆಂದರೆ ಕುಟುಂಬಗಳಲ್ಲಿ ಮತ್ತು ಕುಟುಂಬದ ಹೊರಗಡೆ ಮಹಿಳೆಯರ ಮೇಲೆ ಆಗುತ್ತಿರುವ ದೌರ್ಜನ್ಯ ಮತ್ತು ಅತ್ಯಾಚಾರ. ಕರ್ನಾಟಕ ಮಹಿಳೆಯರೂ ಸಹ ಈ ಮಾನಸಿಕ ತುಡಿತಕ್ಕೆ ಸ್ಪಂದಿಸಿ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಈ ಬಗ್ಗೆ ತಮ್ಮ ಧ್ವನಿಯನ್ನು ಎತ್ತಿರುವುದು ಸರ್ವ ವಿಧಿತ.

1983ರ ಮುಂಚೆಯೆ ಅಪರಾಧ ಕಾನೂನಿನಲ್ಲಿ (Criminal Law) ಬದಲಾವಣೆ ಮಾಡಿ ಮಹಿಳೆಯರ ಮೇಲೆ ಕುಟುಂಬಗಳಲ್ಲಾಗುವ ದೌರ್ಜನ್ಯಗಳನ್ನೂ ಸಹ ಅಪರಾಧವೆಂದು ಪರಿಗಣಿಸಿ ಸೂಕ್ತ ಕಾನೂನಿನ ರಕ್ಷಣೆ ನೀಡಲಾಗಿದೆ. ಹೀಗಿದ್ದೂ ಕುಟುಂಬಗಳಲ್ಲಿ ಮತ್ತು ಕಛೇರಿಗಳಲ್ಲಿ ಹಾಗೂ ಸಮಾಜದ ಇತರ ಸ್ಥಳಗಳಲ್ಲಿ ಮಹಿಳೆಯರ ಮೇಲೆ ಅನೇಕ ರೀತಿಯ ದೌರ್ಜನ್ಯಗಳು ನಡೆಯುತ್ತಿರುವುದು ಸಾರ್ವತ್ರಿಕವಾಗಿ ಗೊತ್ತಿರುವ ವಿಷಯ. ದೈನಂದಿನ ಪತ್ರಿಕೆಗಳಲ್ಲಿ ಪ್ರತಿನಿತ್ಯವೂ ಕನಿಷ್ಠ ಒಂದಾದರೂ ಇಂತಹ ದೌರ್ಜನ್ಯಗಳ ಬಗ್ಗೆ ರಾಜ್ಯದ ವಿವಿದೆಡೆಗಳಿಂದ ವರದಿಯಾಗುತ್ತಿವೆ. (ನಮೂನೆಗಾಗಿ ಅನುಬಂಧ-9 ನೋಡಿ.)

ಈ ದೌರ್ಜನ್ಯಗಳು ಹಲವಾರು ರೀತಿಯಲ್ಲಿದ್ದು ಪ್ರಮುಖವಾಗಿ ವರದಕ್ಷಿಣೆಗಾಗಿ ಹಿಂಸೆ, ಗಂಡಂದಿರು ಹೆಂಡತಿಯನ್ನು ಹೊಡೆಯುವುದು, ಗಂಡನ ಮನೆಯಲ್ಲಿ ಅಕಾಲಿಕ ಹಾಗೂ ಸಂಶಯಾಸ್ಪದ ಸಾವು, ಲೈಂಗಿಕ ಕಿರುಕುಳ ಮುಂತಾದವು ಸೇರಿವೆ. ದುರದೃಷ್ಟವಶಾತ್ ಇಂತಹ ಹಿಂಸೆಗಳು ಮನೆಯಲ್ಲಿ ಮತ್ತು ಮನೆಯ ಹೊರಗಡೆ ದೌರ್ಜನ್ಯಕ್ಕೆ ಒಳಗಾದ ಮಹಿಳೆಯರಿಗೆ ಗೊತ್ತಿರುವವರಿಂದಲೇ ಆಗುತ್ತಿರುವುದು ಶೋಚನೀಯ. ಹಲವಾರು ಕಡೆಗಳಲ್ಲಿ, ಸಾಮಾಜಿಕವಾಗಿ ಮಹಿಳೆಯರಿಗೆ ರಕ್ಷಣೆ ನೀಡುವ ಜವಾಬ್ದಾರಿ ಹೊತ್ತಿರುವ ತಂದೆ, ಗಂಡ, ಮಗ, ಮುಂತಾದವರು ಈ ರೀತಿಯ ದೌರ್ಜನ್ಯದಲ್ಲಿ ಮೀಸಲಾಗಿರುವುದು ಹೆಚ್ಚಿನ ಆತಂಕಕಾರಿಯಾಗಿದೆ.

1986ರಲ್ಲಿ ವರದಕ್ಷಿಣೆಯ ವಿರುದ್ಧ ಕಾನೂನಿನಲ್ಲಿ (The Dowry Prohibition Act, 1961) ಬದಲಾವಣೆ ಮಾಡಿ ತಪ್ಪಿತಸ್ಥರಿಗೆ ಕಾನೂನು ಬದ್ಧ ಶಿಕ್ಷೆಯಾಗಬೇಕೆಂದು ಸಂಸತ್ತಿನಲ್ಲಿ ಅನುಮೋದನೆಯಾಗಿದ್ದರೂ ಸಹ ಕರ್ನಾಟಕ ರಾಜ್ಯದಲ್ಲಿ ವರದಕ್ಷಿಣೆಯ ಪಿಡುಗು ವಿದ್ಯಾವಂತರ ಹಾಗೂ ಅವಿದ್ಯಾವಂತರ ಕುಟುಂಬಗಳೆರಡರಲ್ಲೂ ಕಾಣಿಸಿಕೊಳ್ಳುತ್ತಿದೆ. ದಂಡ ವಿಧಿಸಲು ಇರುವ ಕಾನೂನುಗಳ ಪರಿಪಾಲನೆಯಾಗದೆ ಅಪರಾಧ ಮುಂದುವರಿಯುತ್ತಲೇ ಇರುವುದು. ಪರಿಣಾಮಕಾರಿಯಾಗುವ ಹೊಸ ಕ್ರಮಗಳ ಅಗತ್ಯ ಹೆಚ್ಚಿದೆ ಎಂಬುದನ್ನು ಪ್ರತಿಬಿಂಬಿಸುತ್ತದೆ. ಜನಮನವೇ ಇದರಲ್ಲಿ ಶಾಮಿಲಾಗಿರುವುದರಿಂದ ಸಮಸ್ಯೆಗೆ ಪರಿಹಾರ ದೊರಕದಾಗಿದೆ. ಇದಕ್ಕಾಗಿ ಸಮಾಜವನ್ನೇ ವರದಕ್ಷಿಣೆಯ ವಿರುದ್ಧ ಸಕ್ರಿಯಗೊಳಿಸುವುದು ಹೆಚ್ಚು ಸೂಕ್ತವೆನಿಸುತ್ತದೆ.

ಮಹಿಳಾ ಅಭಿವೃದ್ಧಿಯಲ್ಲಿ ತೊಡಗಿರುವ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ ಈ ದಿಶೆಯಲ್ಲಿ ಹೆಚ್ಚಿನದು. ಸಮಾಜದ ಪ್ರಮುಖರು, ನಾಯಕರು ಈ ದಿಶೆಯಲ್ಲಿ ಮಾರ್ಗ ಹಾಕಿಕೊಡಬೇಕಾದದ್ದು ಅಗತ್ಯ. ರಾಜ್ಯದಲ್ಲಿ ನಡೆಯುವ ಎಲ್ಲಾ ಮದುವೆಗಳು ಕಡ್ಡಾಯವಾಗಿ ನೋಂದಣಿಯಾಗುವ ವ್ಯವಸ್ಥೆಯಾಗಬೇಕಲ್ಲದೆ, ಆ ಸಂದರ್ಭದಲ್ಲಿ ಮದುವೆಯಲ್ಲಿ ವರದಕ್ಷಿಣೆ ವ್ಯವಹಾರ ನಡೆದಿಲ್ಲವೆಂಬ ಅಂಶ ಖಚಿತಗೊಳ್ಳುವಂತಾಗಬೇಕು. ಸಮಾಜದಲ್ಲಿ ಈ ಬಗೆಗಿನ ಜಾಗೃತಿ ಮೂಡಿಸಲು ಅಭಿಯಾನಗಳು ನಡೆಯಬೇಕು. ಮಹಿಳಾ ಆರ್ಥಿಕ ಸಬಲತೆಯ ಪ್ರಯತ್ನ ಹಾಗೂ ಅಂತರ್ಜಾತಿಯ ವಿವಾಹಗಳು ವರದಕ್ಷಿಣೆ ಪಿಡುಗನ್ನು ತೊಡೆದು ಹಾಕುವಲ್ಲಿ ಪ್ರಭಾವಯುತವಾದ ಅಸ್ತ್ರಗಳು. ಮದುವೆಗಳು ಸರಳವಾಗಿಯೂ ನಡೆಯುವಂತಾಗಬೇಕು. ಬಡ ಕುಟುಂಬಗಳಲ್ಲಿ ಹುಟ್ಟುವ ಮೊದಲ ಎರಡು ಮಕ್ಕಳಲ್ಲಿಯ ಹೆಣ್ಣು

ಮಕ್ಕಳ ಹೆಸರಿನಲ್ಲಿ ಪಾಲಕರು ಹಾಗೂ ಸರ್ಕಾರ ಸೇರಿ ಹಣ ಠೇವಣಿ ಇಡುವುದರಿಂದ ಹೆಣ್ಣು ಮಕ್ಕಳಿಗೆ ಸಹಾಯ ಒದಗಬಲ್ಲದು. ಹೆಣ್ಣು ಮಗು ಕುಟುಂಬಕ್ಕೆ ಭಾರ ಎನ್ನುವ ಭಾವನೆಯೂ ಕಡಿಮೆಯಾದೀತು. ಎಲ್ಲ ಹೆಣ್ಣು ಮಕ್ಕಳಿಗೆ ಪ್ರಥಮ ಡಿಗ್ರಿಯವರೆಗಿನ ಶಿಕ್ಷಣವನ್ನು ಸರ್ಕಾರವೇ ಉಚಿತವಾಗಿ ಪೂರೈಸುವ ವ್ಯವಸ್ಥೆಯಾದರೆ ಉತ್ತಮ.

ಸರ್ಕಾರದ ಪ್ರತಿ ಕಛೇರಿ ಮತ್ತು ಖಾಸಗಿ ಸಂಘ ಸಂಸ್ಥೆಗಳಲ್ಲಿ, ಕೈಗಾರಿಕೆಗಳಲ್ಲಿ ಹಾಗೂ ಮಹಿಳೆಯರು ಕಾರ್ಯ ನಿರತವಾಗಿರುವ ಇತರ ಉದ್ಯೋಗಗಳ ಸ್ಥಳಗಳಲ್ಲಿ ಮಹಿಳೆಯರ ಮೇಲೆ ಆಗುವ ದೌರ್ಜನ್ಯಕ್ಕೆ ಸಂಬಂಧಪಟ್ಟಂತೆ ಒಂದು ಸ್ಥಾನೀಯ ಸಮಿತಿ ಇರಬೇಕೆಂದು ವರಿಷ್ಠ ನ್ಯಾಯಾಲಯವು ವಿಶಾಖ ವಿರುದ್ಧ ರಾಜಾಸ್ಥಾನ್ ರಾಜ್ಯದ ಕೇಸಿನಲ್ಲಿ 1997ರಲ್ಲಿ ಆದೇಶ ನೀಡಿದ್ದರೂ ಸಹ ಕರ್ನಾಟಕ ರಾಜ್ಯದಲ್ಲಿ ಇಂತಹ ಸಮಿತಿಗಳು ಎಲ್ಲೆಡೆ ರಚಿತವಾಗಿಲ್ಲ. ಹೀಗಾಗಿ ತಾವು ಕೆಲಸ ಮಾಡುತ್ತಿರುವ ಕಡೆಗಳಲ್ಲಿ ಮಹಿಳೆಯರ ಮೇಲಿನ ಕಿರುಕುಳ ಮುಂದುವರಿದೇ ಇದೆ.

ಶ್ರೀಮಂತ ಮತ್ತು ಮಧ್ಯಮ ವರ್ಗದ ಮನೆಗಳಲ್ಲಿ ಕೆಲಸ ಮಾಡುತ್ತಿರುವ ಮಹಿಳೆಯರು ತಾವು ಕೆಲಸ ಮಾಡುತ್ತಿರುವ ಮನೆಗಳ ಪುರುಷರಿಂದ ಲೈಂಗಿಕ ಕಿರುಕುಳಕ್ಕೆ ಒಳಗಾಗುವುದು ಮಾತ್ರವಲ್ಲದೆ ಕಳ್ಳತನ ಮತ್ತು ಬೇಜವಾಬ್ದಾರಿತನದ ಅಪವಾದ ಮುಂತಾದ ವಿಷಯಗಳಲ್ಲಿ ಕುಟುಂಬದ ಮಹಿಳೆಯರಿಂದಲೂ ಹಿಂಸೆಗೊಳಗಾಗುತ್ತಿದ್ದಾರೆ. ಹೀಗೆಯೇ ಇಟ್ಟಿಗೆಯ ಭಟ್ಟಿಗಳಲ್ಲಿ, ಕಟ್ಟಡದ ನಿರ್ಮಾಣಗಳಲ್ಲಿ ಹಾಗೂ ಇದೇ ರೀತಿಯ ಇತರ ಉದ್ಯೋಗಗಳಲ್ಲಿ ಕೆಲಸ ಮಾಡುವ ಮಹಿಳೆಯರು ತಮಗೆ ಕೆಲಸ ಕೊಡುವ ಪುರುಷರಿಂದ ಅಥವಾ ತಮ್ಮ ಜೊತೆ ಕೆಲಸ ಮಾಡುವ ಪುರುಷರಿಂದ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಿರುವುದು ಸಾಮಾನ್ಯವಾಗಿದೆ.

ಇಂತಹ ಅತ್ಯಾಚಾರಕ್ಕೆ ಒಳಗಾದ ಮಹಿಳೆಯರು ತಮ್ಮ ಕೆಲಸವನ್ನು ಕಳೆದುಕೊಳ್ಳುವ ಭಯದಿಂದ ಅತ್ಯಾಚಾರಗಳನ್ನು ಮೂಕವಾಗಿ ಸಹಿಸಿಕೊಳ್ಳುತ್ತಿರುವುದಲ್ಲದೆ ಯಾವುದೇ ರೀತಿಯ ದೂರುಗಳನ್ನು ತಮ್ಮ ಹಿರಿಯ ಅಧಿಕಾರಿಗಳಿಗಾಗಲಿ ಹಾಗೂ ಪೋಲಿಸ್ ಅಧಿಕಾರಿಗಳಿಗಾಗಲಿ ತಿಳಿಸುತ್ತಿಲ್ಲ. ಇದಲ್ಲದೆ, ಇಂತಹ ಅತ್ಯಾಚಾರಕ್ಕೊಳಗಾದ ಮಹಿಳೆಯರು ಪೋಲಿಸ್ ಠಾಣೆಗಳಿಗೆ ಹೋದಾಗ ಅಲ್ಲಿ ಸೂಕ್ತ ಸಹಾಯ ಸಿಗುವ ಭರವಸೆ ಹೊಂದಿರುವುದಿಲ್ಲ. ಅಲ್ಲದೆ, ಇಂತಹ ದೂರುಗಳನ್ನು ಕೊಡಲು ಹೋದಾಗ ಪೋಲಿಸ್ ಠಾಣೆಗಳಲ್ಲೂ ಸಹ ಈ ಮಹಿಳೆಯರು ಅತ್ಯಾಚಾರಕ್ಕೆ ಒಳಗಾದ ನಿದರ್ಶನಗಳಿವೆ.

ಶಾಲಾ ಕಾಲೇಜುಗಳಲ್ಲಿ ಶಿಕ್ಷಕಿಯರು ಹಾಗೂ ವಿದ್ಯಾರ್ಥಿನಿಯರು ಶಿಕ್ಷಕರಿಂದ ಹಾಗೂ ವಿದ್ಯಾರ್ಥಿಗಳಿಂದ ಲೈಂಗಿಕ ಹಿಂಸೆಗೆ ಒಳಗಾಗಿರುವ ನಿದರ್ಶನಗಳಿವೆ. ಬಸ್ಸಿನಲ್ಲಾಗಲಿ ಅಥವಾ ರೈಲಿನಲ್ಲಾಗಲಿ ಮಹಿಳೆಯರು ಪ್ರಯಾಣ ಮಾಡುವಾಗ, ನಗರ ಅಥವಾ ಗ್ರಾಮೀಣ ಪ್ರದೇಶಗಳಲ್ಲಿ ಬಸ್ಸಿಗಾಗಿ ಕಾಯುತ್ತಿರುವಾಗ ಮಹಿಳೆಯರಿಗೆ ಪುರುಷರು ವಿವಿಧ ರೀತಿಯ ತೊಂದರೆ ನೀಡುತ್ತಿರುವುದೂ ವರದಿಯಾಗಿದೆ.

ಮಹಿಳಾ ಅಭಿವೃದ್ಧಿಗೆ ಸಂಬಂಧಪಟ್ಟಂತೆ ವಿವಿಧ ಕಾರ್ಯಕ್ರಮಗಳಿಗಾಗಿ ಸರ್ಕಾರದಿಂದ ಸಹಾಯ ಧನ ಸ್ವೀಕರಿಸುತ್ತಿರುವ ಅನೇಕ ಸ್ವಯಂ ಸೇವಾ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಸರ್ಕಾರದಿಂದ ನಿಗದಿತವಾದ ಸಂಬಳ ದೊರೆಯುತ್ತಿಲ್ಲ. ಹೆಚ್ಚಿನ ಹಣಕ್ಕೆ ಸಹಿ ಹಾಕಿಸಿಕೊಂಡು ಕಡಿಮೆ ಹಣ ನೀಡುತ್ತಿರುವುದು ಕಂಡು ಬಂದಿದೆ. ಈ ದುಷ್ಟಪದ್ಧತಿಯನ್ನು ಹೋಗಲಾಡಿಸದಿದ್ದರೆ ಮಹಿಳಾ ಸಂಘ-ಸಂಸ್ಥೆಗಳ ಅಭಿವೃದ್ಧಿ ಹಾಗೂ ಇವುಗಳಿಂದ ಪ್ರಯೋಜನ ಪಡೆಯುವ ಬಹುತೇಕ ಮಹಿಳೆಯರ ಅಭಿವೃದ್ಧಿ ಕುಂಠಿತವಾಗಿಯೇ ಇರುತ್ತದೆ.

ಸಂತ್ರಸ್ತ ಹಾಗೂ ನಿರಾಧಾರ ಮಹಿಳೆಯರಿಗೆ ಹಾಗೂ ಅವರ ಮಕ್ಕಳಿಗೆ 11 ರಾಜ್ಯ ಕೇಂದ್ರಗಳು, 13 ಅಲ್ಪಾವಧಿ ವಸತಿ ಗೃಹಗಳು ಹಾಗೂ 8 ಸ್ವೀಕಾರ ಕೇಂದ್ರಗಳಿದ್ದರೂ ಸಹ, ಇದರ ಬಗ್ಗೆ ಹೆಚ್ಚಿನ ಮಹಿಳೆಯರಿಗೆ ಅರಿವಿರುವುದಿಲ್ಲ. ಆದ್ದರಿಂದ ಈ ತಾತ್ಕಾಲಿಕ ವಸತಿ ಗೃಹಗಳ ಬಗ್ಗೆ ಹೆಚ್ಚಿನ ಪ್ರಚಾರವಾಗಬೇಕು ಹಾಗೂ ಇಲ್ಲಿ ದಾಖಲಾದ ಮಹಿಳೆಯರಿಗೆ

ಆತ್ಮವಿಶ್ವಾಸ ಮೂಡುವಂತಹ ವಾತಾವರಣನ್ನುಂಟು ಮಾಡಬೇಕು. ಈ ಕಾರ್ಯದಲ್ಲಿ ಹೆಚ್ಚಿನ ಸ್ವಯಂ ಸೇವಾ ಸಂಸ್ಥೆಗಳನ್ನು ತೊಡಗಿಸಿ ಅವುಗಳಿಗೆ ಕಾಲಕ್ಕನುಗುಣವಾಗಿ ಸಹಾಯಧನವನ್ನು ಹೆಚ್ಚಿಸಿ ಹಣವನ್ನು ಸಮಯಕ್ಕೆ ಸರಿಯಾಗಿ ನೀಡಿದರೆ ಹೆಚ್ಚಿನ ನಿರಾಧಾರ ಮಹಿಳೆಯರಿಗೆ ಉಪಯುಕ್ತವಾಗುತ್ತದೆ.

ದೇಶದಲ್ಲಿ ದ್ವಿ-ಪತ್ನಿ ಪದ್ಧತಿ ಕಾನೂನುಬಾಹಿರವಾಗಿದ್ದರೂ ಸಹ ಅನೇಕ ಪುರುಷರು ಮೊದಲ ಹೆಂಡತಿ ಬದುಕಿದ್ದಾಗ್ಯೂ ಎರಡನೇ ಮದುವೆಯಾಗಿದ್ದಾರೆ. ಇದರ ಪರಿಣಾಮವಾಗಿ ಮೊದಲನೆ ಹೆಂಡತಿ ತನ್ನ ಪತಿಯಿಂದ ಕಡೆಗಾಣಿಸಲ್ಪಟ್ಟು ಮಾನಸಿಕವಾಗಿ ಹಿಂಸೆ ಪಡುವುದಲ್ಲದೆ ತನ್ನ ಮತ್ತು ತನ್ನನ್ನು ಅವಲಂಭಿಸಿರುವ ಮಕ್ಕಳ ಜೀವನ ನಿರ್ವಹಣೆಯ ಹೊಣೆಯನ್ನು ಹೊರಬೇಕಾಗುತ್ತದೆ. ಹೆಚ್ಚಿನ ಸಂದರ್ಭಗಳಲ್ಲಿ ಇಂತಹ ಮಹಿಳೆಯರಿಗೆ ಯಾವುದೇ ಮೂಲದಿಂದ ವರಮಾನ ಇರುವುದಿಲ್ಲ ಹಾಗೂ ಪತಿಯೂ ಸಹ ಹಣ ನೀಡುವುದಿಲ್ಲ. ಈ ಮಹಿಳೆಯರ ಜೀವನ ನಿರ್ಭರವಾಗುವುದಲ್ಲದೆ ಸಮಾಜದಲ್ಲಿ ಇವರಿಗೆ ಯಾವ ರೀತಿಯ ರಕ್ಷಣೆಯೂ ಇರುವುದಿಲ್ಲ. ಇವರ ಮಕ್ಕಳ ಶಿಕ್ಷಣಕ್ಕಂತೂ ಧಕ್ಕೆ ಆಗುತ್ತದೆ ಹಾಗೂ ಈ ಮಕ್ಕಳು ಶಾಶ್ವತವಾಗಿ ಸಮಾಜಕ್ಕೆ ಹೊಣೆಯಾಗುವ ಸಾಧ್ಯತೆ ಹೆಚ್ಚಿದೆ.

ಈ ಮಹಿಳೆಯರು ರಕ್ಷಣೆ ಪಡೆಯಲು ಕಾನೂನಿನ ಮೊರೆ ಹೊಕ್ಕಾಗ ನ್ಯಾಯಾಲಯಗಳಲ್ಲಿ ಆಗುವ ಅತಿ ವಿಳಂಬದಿಂದ ಬೇಸತ್ತು ತಮ್ಮ ದೂರುಗಳನ್ನು ಎಷ್ಟೊ ಜನರು ಹಿಂತೆಗೆದುಕೊಂಡಿದ್ದಾರೆ. 1987ರ ಕುಟುಂಬ ನ್ಯಾಯಾಲಯ ಕಾಯಿದೆ (The Family Court's Act, 1984) ಯ ಪ್ರಕಾರ ಕುಟುಂಬಗಳಲ್ಲಿ ಆಗುವ ಮಹಿಳೆಯರ ಜೀವನ ಸಮಸ್ಯೆಗಳಿಗೆ ತ್ವರಿತ ನ್ಯಾಯ ದೊರಕಬೇಕೆಂಬ ಉದ್ದೇಶವಿದ್ದರೂ ಸಹ ಇಂತಹ ಕುಟುಂಬ ನ್ಯಾಯಾಲಯಗಳಲ್ಲಿ ಹೆಚ್ಚಿನ ವ್ಯಾಜ್ಯಗಳು ಪರಿಹಾರ ಕಾಣದೆ ಬಹಳ ಕಾಲದಿಂದ ಉಳಿದಿದೆ. 'ಈ ಕಾಯಿದೆಯನ್ವಯ ಕುಟುಂಬ ನ್ಯಾಯಾಲಯಗಳು ಆರು ತಿಂಗಳೊಳಗಾಗಿ ಪರಿಹಾರ ದೊರಕಿಸಿಕೊಡಬೇಕೆಂದಿದ್ದರೂ ಸಹ ದುರ್ದೈವವಶಾತ್ ವರ್ಷಾನುಗಟ್ಟಲೆ ಪರಿಹಾರ ಕಾಣದ ಅನೇಕ ಮಹಿಳೆಯರ ಜೀವನ ದುರ್ಭರವಾಗಿ ತೊಂದರೆ ಪಡುತ್ತಿದ್ದಾರೆ.

ಕೇಂದ್ರ ಸರ್ಕಾರವು ಕುಟುಂಬಗಳಲ್ಲಿ ದೌರ್ಜನ್ಯ ತಡೆಗಟ್ಟುವಿಕೆ ಮಸೂದೆಯನ್ನು ತಯಾರಿಸಿ, ಸಂಸತ್ತಿನಲ್ಲಿ ಮುಂದಿನ ಅಧಿವೇಶನದಲ್ಲಿ ಮಂಡಿಸಲು ತಯಾರಾಗುತ್ತಿರುವ ಸುದ್ದಿ ಸಂತೋಷದಾಯಕವಾಗಿದೆ. 'ಕುಟುಂಬಗಳಲ್ಲಿ ದೌರ್ಜನ್ಯ' ಇದರ ಅರ್ಥ ಮತ್ತು ಕುಟುಂಬದ ಮಹಿಳೆಯರು ಮತ್ತು ಹೆಣ್ಣು ಮಕ್ಕಳ ರಕ್ಷಣೆ ಮತ್ತು ಅವರ ಮೇಲಾಗುವ ವಿವಿಧ ರೀತಿಯ ಹಿಂಸೆಗಳನ್ನು ತಡೆಗಟ್ಟಲು ಈ ಮಸೂದೆಯಲ್ಲಿ ಅಳವಡಿಸಲಾಗಿದೆ ಎಂಬುದು ಮಹಿಳಾ ಅಭಿವೃದ್ಧಿಯಲ್ಲಿ ಒಂದು ಪ್ರಮುಖ ಹೆಜ್ಜೆಯಾಗಲಿದೆ (ಅನುಬಂಧ - 10ರಲ್ಲಿ ಲಗತ್ತಿಸಿದೆ).

ಶಿಶು ಮದುವೆಯ ನಿಷಿದ್ಧ ಕಾಯಿದೆ (The Child Marriage Restraint Amendment Act, 1976) ಪ್ರಕಾರ ಕಾನೂನುಬದ್ಧವಾಗಿ 18 ವರ್ಷಕ್ಕೆ ಮುಂಚಿ ಹೆಣ್ಣು ಮಕ್ಕಳ ಮದುವೆಯನ್ನು ನಿಷೇಧಿಸಿದ್ದರೂ ಸಹ ಚಿಕ್ಕ ವಯಸ್ಸಿನಲ್ಲಿ ಹೆಣ್ಣು ಮಕ್ಕಳ ಮದುವೆ ಇನ್ನೂ ನಡೆಯುತ್ತಲೇ ಇದೆ. ಅದರಲ್ಲೂ ಉತ್ತರ ಕರ್ನಾಟಕದ (ಹೆಣ್ಣು ಮಕ್ಕಳ ಮದುವೆಯ ಸರಾಸರಿ ವಯಸ್ಸು : ಬೆಳಗಾವಿ - 18.75, ಬೀದರ್ - 18.78, ಬಿಜಾಪುರ - 18.27, ಗುಲ್ಬರ್ಗಾ - 18.64, ರಾಯಚೂರು - 18.26 - ಸರಾಸರಿ ವಯಸ್ಸು ಇಷ್ಟು ಕಡಿಮೆ ಇದ್ದಾಗ ಹೆಚ್ಚಿನ ಮದುವೆಗಳು ಕಡಿಮೆ ವಯಸ್ಸಿನಲ್ಲಿ ಆಗಿರುವುದನ್ನು ತೋರಿಸುತ್ತದೆ). ಅನೇಕ ಜಿಲ್ಲೆಗಳಲ್ಲಿ ಇಂತಹ ಕಾನೂನುಬಾಹಿರ ವಿವಾಹಗಳಾಗುತ್ತಿದ್ದರೂ ಸಹ ಸಂಬಂಧಪಟ್ಟ ಅಧಿಕಾರಿಗಳು ಹೆಚ್ಚಿನ ಸಂದರ್ಭಗಳಲ್ಲಿ ಪೋಷಕರ ವಿರುದ್ಧ ಯಾವುದೇ ರೀತಿಯ ಶಿಸ್ತಿನ ಕ್ರಮ ತೆಗೆದುಕೊಳ್ಳುತ್ತಿಲ್ಲ. ಇದರ ಫಲವಾಗಿ ಅಪ್ರಾಪ್ತ ವಯಸ್ಸಿನಲ್ಲಿ ಹೆಣ್ಣು ಮಕ್ಕಳು ಗರ್ಭಿಣಿಯರಾಗಿ ತಾವು ತೊಂದರೆಗೊಳಗಾಗುವುದಲ್ಲದೆ ತಮಗೆ ಹುಟ್ಟುವ ಮಗುವನ್ನೂ ತೊಂದರೆಗೆ ಒಳಪಡಿಸುತ್ತಿದ್ದಾರೆ. ಹಾಗೂ ಕಡಿಮೆ ವಯಸ್ಸಿನಲ್ಲಿ ಮದುವೆಯಾದ ಹೆಣ್ಣು ಮಕ್ಕಳು ತಮ್ಮ ಗಂಡನ ಮನೆಯಲ್ಲಾಗುತ್ತಿರುವ ವಿವಿಧ ರೀತಿಯ ಹಿಂಸೆಗಳನ್ನು ಮೂಕವಾಗಿ ಸಹಿಸಿಕೊಳ್ಳುತ್ತಿದ್ದಾರೆ. ಹೆಣ್ಣು ಮಕ್ಕಳನ್ನು

ಶಾಲಾ ಕಾಲೇಜಿಗೆ ಕಳುಹಿಸಲು ವ್ಯವಸ್ಥೆ ಭದ್ರಗೊಂಡಾಗ ಅವರ ಶಿಕ್ಷಣ ಮಟ್ಟ ಹೆಚ್ಚುವುದಲ್ಲದೆ ಮದುವೆಯ ವಯಸ್ಸೂ ಹೆಚ್ಚುತ್ತದೆ. ಇದರ ಪರಿಣಾಮವಾಗಿ ತಮ್ಮ ಕುಟುಂಬವನ್ನು ಸುವ್ಯವಸ್ಥಿತವಾಗಿ ನಡೆಸಿಕೊಳ್ಳುವುದಲ್ಲದೆ ಗಂಡನ ಮನೆಯಲ್ಲಾಗುವ ಹಿಂಸೆಯ ವಿರುದ್ಧ ಧ್ವನಿ ಎತ್ತಲು ಮಹಿಳೆಯರಿಗೆ ಆಸ್ಪದವಾಗುತ್ತದೆ.

ರಂಗಭೂಮಿ, ಚಲನಚಿತ್ರ ಹಾಗೂ ಟಿ.ವಿ. ಜಾಹೀರಾತುಗಳಲ್ಲಿ ಮಹಿಳೆಯರು ಸುಲಭ ಸಂಪಾದನೆಗಳಿಗಾಗಿ ಶೋಷಣೆಗೆ ಒಳಗಾಗುತ್ತಿದ್ದಾರೆ. ಈ ರೀತಿಯ ಮಹಿಳೆಯರು ಬೀಡಿ ಕಟ್ಟುವ ಕೆಲಸದಲ್ಲಿ ನಿರತರಾಗಿರುವ ಮಹಿಳೆಯರು ಹಾಗೂ ಕಾರಾಗೃಹದಲ್ಲಿರುವ ಮಹಿಳೆಯರು, ಅಲೆಮಾರಿ ಮಹಿಳೆಯರು ಮುಂತಾದ ವಿಶಿಷ್ಟ ಮಹಿಳಾ ಗುಂಪುಗಳ ಬಗ್ಗೆಯೂ ಹೆಚ್ಚಿನ ಅಧ್ಯಯನ ಮಾಡಿ ಇವರ ಸಮಸ್ಯೆಗಳ ಪರಿಹಾರದ ಬಗ್ಗೆ ಸಲಹೆಗಳನ್ನು ಅಂತಿಮ ವರದಿಯಲ್ಲಿ ನೀಡಲಾಗುವುದು. ಈ ರೀತಿಯ ಗುಂಪುಗಳ ಒಂದು ಪಟ್ಟಿಯನ್ನು ವರದಿಯಲ್ಲಿ ನೀಡಲಾಗಿದೆ (ಅನುಬಂಧ - 11).

## ಕುಡಿತದ ದುಷ್ಪರಿಣಾಮ:

ಅಬಕಾರಿ ಇಲಾಖೆಯಿಂದ ಸರ್ಕಾರಕ್ಕೆ ಹೆಚ್ಚಿನ ವರಮಾನ ಬರುತ್ತಿದ್ದರೂ ಸಹ ಕುಡಿತದಿಂದ ಅನೇಕ ಕುಟುಂಬಗಳು ನಾಶವಾಗುತ್ತಿವೆ. ಕೆಲವು ಕುಟುಂಬದಲ್ಲಿ ಪುರುಷರು ಅರ್ಧದಷ್ಟು ವರಮಾನವನ್ನು ಮದ್ಯಪಾನದ ಮೇಲೆ ಖರ್ಚು ಮಾಡುತ್ತಿರುವುದರಿಂದ ಕುಟುಂಬದ ಸದಸ್ಯರು ಪೌಷ್ಟಿಕ ಆಹಾರ, ಆರೋಗ್ಯ ಮತ್ತು ಶಿಕ್ಷಣ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಅದರಲ್ಲೂ ಮಹಿಳೆಯರು ಮತ್ತು ಬಾಲಕಿಯರು ಈ ವಿಷಯಗಳಲ್ಲಿ ಇನ್ನೂ ಹೆಚ್ಚಿನ ವಂಚನೆಗೆ ಒಳಗಾಗಿದ್ದಾರೆ. ಕುಡಿತದ ಪರಿಣಾಮವಾಗಿ ಕುಟುಂಬಗಳು ಸಾಲಗಾರರಾಗಿರುವ ಪರಿಣಾಮದಿಂದ ಮಹಿಳೆಯರು ಮತ್ತು ಬಾಲಕಿಯರ ಮೇಲೆ ದೌರ್ಜನ್ಯ ಮತ್ತು ಅತ್ಯಾಚಾರ ಹೆಚ್ಚುತ್ತಿವೆ. ಬಾಲಕಿಯರನ್ನು ಶಾಲೆಗೆ ಕಳುಹಿಸದೆ ಇರುವುದಕ್ಕೆ ಇದೂ ಒಂದು ಕಾರಣವೆಂಬುದನ್ನು ತಿಳಿದಿರಬೇಕು.

ಅಣೆಕಟ್ಟು, ವಿದ್ಯುತ್ ಸ್ಥಾವರ ಮುಂತಾದ ಅಭಿವೃದ್ಧಿ ಚಟುವಟಿಕೆಗಳ ಅಂಗವಾಗಿ ಸರ್ಕಾರ ತೆಗೆದುಕೊಂಡಿರುವ ಪುನರ್ವಸತಿ ಕಾರ್ಯಕ್ರಮಕ್ಕಾಗಿ ಸರ್ಕಾರ ನೀಡುವ ಸಹಾಯಧನವನ್ನೂ ಸಹ ಹೆಚ್ಚಿನ ಪುರುಷರು ಕುಡಿತಕ್ಕಾಗಿ ಉಪಯೋಗಿಸಿ ತಮ್ಮ ಕುಟುಂಬಗಳ ಸರ್ವನಾಶಕ್ಕೆ ಕಾರಣವಾಗಿರುವುದು ದುಃಖಕರ ಅಂಶ. ರಾಜ್ಯದಲ್ಲಿ ಸರಾಯಿ ಅಂಗಡಿಗಳ ಸಂಖ್ಯೆ ಸೀಮಿತ ಪ್ರದೇಶಗಳನ್ನು ಮೀರಿ ಜನವಸತಿಯ ನಡುವೆಯೇ ಹೆಚ್ಚುತ್ತಿರುವುದು ಆತಂಕದ ಸಂಗತಿ. ಮಹಿಳಾ ಅಭಿವೃದ್ಧಿ ಮತ್ತು ಇದರ ಮೂಲಕ ರಾಜ್ಯದ ಅಭಿವೃದ್ಧಿಯಾಗಬೇಕಾದರೆ ಸೆರೆ ಅಂಗಡಿಗಳ ಮೇಲೆ ನಿರ್ಬಂದ ಹಾಕಬೇಕು. ಈ ಸಂಬಂಧದಲ್ಲಿ ಸರ್ಕಾರ ನಿಷ್ಠುರ ಕ್ರಮ ತೆಗೆದುಕೊಳ್ಳಬೇಕು.

ಬಹಳ ಹಿಂದೆಯೇ ರಾಜ್ಯ ಸರ್ಕಾರವು ಪಾನನಿರೋಧವನ್ನು ಕೈ ಬಿಡುವ ಠರಾವನ್ನು ಅಂಗೀಕರಿಸುವಾಗ ಈ ವಿಷಯದಲ್ಲಿ ಮಾಜಿ ಮಂತ್ರಿ ದಿವಂಗತ ಶ್ರೀಮತಿ ಯಶೋದರ ದಾಸಪ್ಪನವರು ತಮ್ಮ ಮಂತ್ರಿ ಪದವಿಗೆ ರಾಜೀನಾಮೆ ನೀಡಿದಾಗ ನೀಡಿದ ಹೇಳಿಕೆಗಳು ಇಂದಿಗೂ ಪ್ರಸ್ತುತವಾಗಿವೆ.

## ಕಾನೂನು ಶಿಕ್ಷಣ:

ಕರ್ನಾಟಕ ರಾಜ್ಯದಲ್ಲಿ ಸರ್ಕಾರ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳು ಅನೇಕ ಕಡೆ ಮಹಿಳೆಯರಿಗೆ ಸಂಬಂಧಪಟ್ಟಂತೆ ಕಾನೂನು ಜಾಗೃತ ಶಿಬಿರಗಳನ್ನು ಏರ್ಪಡಿಸುತ್ತಿರುವುದು ಶ್ಲಾಘನೀಯ. ಈ ಶಿಬಿರಗಳಿಂದ ನೊಂದ ಮಹಿಳೆಯರು ಉಪಯೋಗ ಪಡೆಯುತ್ತಿರುವುದು ಅನೇಕ ಕಡೆ ಕಾಣಸಿಗುತ್ತದೆ. ಆದರೂ ಸಹ ಗ್ರಾಮೀಣ ಪ್ರದೇಶಗಳಲ್ಲಿ ಇಂತಹ ಶಿಬಿರಗಳನ್ನು ನಡೆಸುವ ಅವಶ್ಯಕತೆ ಇನ್ನೂ ಬಹಳಷ್ಟಿದೆ. ಈ ಶಿಬಿರಗಳನ್ನು ಮಹಿಳೆಯರಿಗೆ ಮಾತ್ರ ಮೀಸಲಾಗಿರಿಸದೆ ಪುರುಷರನ್ನು ಭಾಗವಹಿಸುವಂತೆ ಪ್ರೇರೇಪಿಸದರೆ ಇಡೀ ಸಮಾಜದಲ್ಲಿ ಮಹಿಳೆಯರ ಕಾನೂನಿಗೆ ಸಂಬಂಧಪಟ್ಟಂತೆ ಒಂದು ಜಾಗೃತಿ ಮೂಡುತ್ತದೆ.

**ದೇವದಾಸಿಯರ ದುಸ್ಥಿತಿ:**

ಉತ್ತರ ಕರ್ನಾಟಕದ ಬೆಳಗಾವಿ, ಬಿಜಾಪುರ ಮತ್ತಿತರ ಜಿಲ್ಲೆಗಳಲ್ಲಿ ದೇವರ ಹೆಸರಿನಲ್ಲಿ ಮೂಢನಂಬಿಕೆಯ ಫಲವಾಗಿ ದೇವದಾಸಿ ಪದ್ಧತಿ ಇಂದಿಗೂ ಮುಂದುವರೆಯುತ್ತಿರುವುದು ಅತಿ ಶೋಚನೀಯ ಹಾಡುಹಗಲೇ ಹಿಂದುಳಿದ ವರ್ಗದ ಮಹಿಳೆಯರ ಅರೆ ಬೆತ್ತಲೆ ಪ್ರದರ್ಶನ ಮಾಡುತ್ತಿರುವುದು 2001ನೇ ಇಸವಿಯಲ್ಲೂ ಮುಂದುವರೆದಿದ್ದು, ಇದನ್ನು ಅಭಿವೃದ್ಧಿಯ ಮುಂಚೂಣಿಯಲ್ಲಿರುವ ಕರ್ನಾಟಕ ರಾಜ್ಯ ಕಡೆಗಾಣಿಸುವಂತಿಲ್ಲ ಸ್ವಯಂ ಸೇವಾ ಸಂಸ್ಥೆಗಳ ಸಹಕಾರದಿಂದ ಸಂಬಂಧಪಟ್ಟ ಸ್ಥಳೀಯ ಅಧಿಕಾರಿಗಳು ಈ ಅನಿಷ್ಟ ಪದ್ಧತಿಯ ವಿರುದ್ಧ ಇನ್ನೂ ಹೆಚ್ಚಿನ ಕ್ರಮ ತೆಗೆದುಕೊಳ್ಳಬೇಕಾದದ್ದು ಅತ್ಯಾವಶ್ಯಕ (ಅನುಬಂಧ -12).

ಅನೇಕ ಸ್ವಯಂ ಸೇವಾ ಸಂಸ್ಥೆಗಳು ದೇವದಾಸಿ ಪದ್ಧತಿಯ ನಿರ್ಮೂಲನೆಗೆ ಮತ್ತು ಅವರ ಪುನರ್ವಸತಿಗೆ ಹಾಗೂ ಅವರ ಮಕ್ಕಳ ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರೂ, ಪ್ರಬಲವಾದ ಸ್ಥಳೀಯ ಪುರುಷ ಶಕ್ತಿ ಹಾಗೂ ಹಿರಿಯ ದೇವದಾಸಿಯರು ಚಿಕ್ಕ ವಯಸ್ಸಿನ ಹೆಣ್ಣು ಮಕ್ಕಳನ್ನು ಈ ಅನಿಷ್ಟ ಪದ್ಧತಿಗೆ ಆಕರ್ಷಿಸುತ್ತಿರುವುದು ದುರ್ದೈವ.

1986ರಲ್ಲಿ ಸಂಸತ್ತಿನಿಂದ ಅನುಮೋದಿಸಲ್ಪಟ್ಟ "The Immoral Traffic (Prevention)Act" ನ ಪ್ರಕಾರ ವೃತ್ತಿನಿರತ ಲೈಂಗಿಕ ಕಾರ್ಯದಲ್ಲಿ ತೊಡಗಿರುವವರಿಗೆ ಮತ್ತು ಅದಕ್ಕೆ ಸಂಬಂಧಪಟ್ಟ ದಲ್ಲಾಳಿಗಳಿಗೆ ಮತ್ತು ಚಿಕ್ಕ ವಯಸ್ಸಿನ ಹೆಣ್ಣು ಮಕ್ಕಳನ್ನು ಈ ವೃತ್ತಿಗಾಗಿ ಪುಸಲಾಯಿಸುವವರಿಗೆ ಹೆಚ್ಚಿನ ಶಿಕ್ಷೆ ಕೊಡಬೇಕೆಂದು ತಿಳಿಸಿದೆ, ಹೀಗಿದ್ದಾಗ್ಯೂ ರಾಜ್ಯಾದ್ಯಂತ ದೊಡ್ಡ ನಗರಗಳಲ್ಲದೆ, ಚಿಕ್ಕ ಚಿಕ್ಕ ಪಟ್ಟಣಗಳಲ್ಲಿಯೂ ವೇಶ್ಯಾ ವೃತ್ತಿ ರಾಜಾರೋಷವಾಗಿ ನಡೆಯುತ್ತಿದೆ ಈ ವೃತ್ತಿಯಲ್ಲಿರುವ ಮಹಿಳೆಯರ ಪರಿಸ್ಥಿತಿ ಯಾವುದೇ ರೀತಿಯಲ್ಲೂ ಉತ್ತಮವಾಗಿಲ್ಲದಿರುವುದು, ಅದರಲ್ಲೂ ಇವರ ಆರೋಗ್ಯ ಮಟ್ಟ ಅತ್ಯಂತ ಕಡಿಮೆ ಮಟ್ಟದಲ್ಲಿರುವುದು ಶೋಚನೀಯ ಇದರ ಪರಿಣಾಮವಾಗಿ (AIDS) ಏಡ್ಸ್ ಅನ್ನೂ ಒಳಗೊಂಡಂತೆ ಲೈಂಗಿಕ ಸಂಪರ್ಕ ಜಾಡ್ಯ (Sexually Transmitted Diseases) ಗಳು ಸಮಾಜದಲ್ಲಿ ಎಲ್ಲಾ ಕಡೆಯೂ ಹರಡುವ ಸಾಧ್ಯತೆ ಇದೆ. ತಮ್ಮ ವೃತ್ತಿಯನ್ನು ಬಿಟ್ಟು ಬಂದಿರುವ ದೇವದಾಸಿಯರ ಹಾಗೂ ವೃತ್ತಿ ನಿರತ ಲೈಂಗಿಕ ಕಾರ್ಯಕರ್ತರಿಗೆ ಪುನರ್ವಸತಿ ಯೋಜನೆಗಳ ಅನುಷ್ಠಾನ ಪ್ರಭಾವಶಾಲಿಯಾಗಿ ಆದರೆ, ಇಂತಹ ಹೆಚ್ಚಿನ ಮಹಿಳೆಯರಲ್ಲಿ ತಮ್ಮ ವೃತ್ತಿಯನ್ನು ಬಿಟ್ಟು ಬರಲು ಆತ್ಮವಿಶ್ವಾಸ ಮತ್ತು ಆಶಾದಾಯಕ ಭಾವನೆ ಮೂಡುತ್ತದೆ. ಈ ರೀತಿಯ ಪುನರ್ವಸತಿ ಕಾರ್ಯಕ್ರಮದಲ್ಲಿ ಹೆಚ್ಚು ಹೆಚ್ಚು ಸ್ವಯಂ ಸೇವಾ ಸಂಸ್ಥೆಗಳನ್ನು ತೊಡಗಿಸಿ ಪುನರ್ವಸತಿಯ ಅಂಗವಾಗಿ ಸೂಕ್ತ ತರಬೇತಿಯನ್ನು ನೀಡಿ ಉದ್ಯೋಗವಕಾಶ ಮತ್ತು ಮದುವೆಯ ಅವಕಾಶ ಮಾಡಿಕೊಟ್ಟರೆ ಕ್ರಮೇಣ ಈ ಮಹಿಳೆಯರ ಸಾಮಾಜಿಕ ಬದುಕು ಉತ್ತಮಗೊಳ್ಳುವುದರಲ್ಲಿ ಸಂದೇಹವಿಲ್ಲ.

**ಸಲಹೆಗಳು:**

1. ಸರ್ಕಾರದ ಪ್ರತಿ ಕಛೇರಿ, ಖಾಸಗಿ ಕಛೇರಿ ಹಾಗೂ ಸಂಘ ಸಂಸ್ಥೆಗಳು, ಕೈಗಾರಿಕೆಗಳು ಹಾಗೂ ಮಹಿಳೆಯರು ಕೆಲಸ ಮಾಡುವ ಇತರ ಕಡೆಗಳಲ್ಲಿ ವರಿಷ್ಠ ನ್ಯಾಯಾಲಯದ ಆದೇಶದಂತೆ ಲೈಂಗಿಕ ಕಿರುಕುಳ ಪರಿಹಾರಕ್ಕೆ ಸಂಬಂಧಪಟ್ಟಂತೆ ಒಂದೊಂದು ಸ್ಥಾನೀಯ ಸಮಿತಿಯನ್ನು ಶೀಘ್ರವಾಗಿ ರಚಿಸುವಂತೆ ಎಲ್ಲಾ ಇಲಾಖೆಗಳಿಗೆ ಸರ್ಕಾರ ಸೂಕ್ತ ನಿರ್ದೇಶನ ನೀಡುವುದಲ್ಲದೇ, ಈ ನಿರ್ದೇಶನಗಳು ಜಾರಿಗೆ ಬಂದಿರುವುದರ ಬಗ್ಗೆ ದೃಢೀಕರಣ ಮಾಡಿಕೊಳ್ಳಬೇಕು ಹಾಗೂ ಇದರ ಜೊತೆ ಜೊತೆಯಾಗಿಯೇ ಮಹಿಳೆಯರು ಕೆಲಸ ಮಾಡುವ ಕಡೆ ಲೈಂಗಿಕ ಕಿರುಕುಳ ಪರಿಹಾರಕ್ಕೆ ಸಂಬಂಧಪಟ್ಟಂತೆ ಸೂಕ್ತ ಕಾನೂನನ್ನು ರಚಿಸಬೇಕು.
2. ಶ್ರೀಮಂತ ಮತ್ತು ಮಧ್ಯಮ ವರ್ಗದ ಮನೆಗಳಲ್ಲಿ ಕೆಲಸ ಮಾಡುತ್ತಿರುವ ಮಹಿಳೆಯರು ಅಸಂಘಟಿತರಾಗಿರುವುದರಿಂದ

ಅವರಿಗೆ ನ್ಯಾಯವಾಗಿ ದೊರಕಬೇಕಾದ ಅನೇಕ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಆದ್ದರಿಂದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನೇತೃತ್ವದಲ್ಲಿ, ಸ್ಥಳೀಯ ಸ್ವಯಂ ಸೇವಾ ಸಂಸ್ಥೆಗಳ ಸಹಭಾಗಿತ್ವದಲ್ಲಿ ಇಂತಹ ಮಹಿಳೆಯರ ನೋಂದಣಿಯಾಗಬೇಕು ಹಾಗೂ ಇವರ ಸಂಬಳ ಮತ್ತಿತರ ವಿಷಯಗಳಿಗೆ ಸಂಬಂಧಪಟ್ಟಂತೆ ನೀತಿ ನಿಯಮಾವಳಿಗಳು ರೂಪಿತವಾಗಬೇಕು.

3. ಬೆಂಗಳೂರಿನ ಅಲಸೂರು ಗೇಟ್ ಪೋಲಿಸ್ ಠಾಣೆಯಲ್ಲಿರುವ **"ಮಹಿಳಾ ಪೋಲಿಸ್ ಠಾಣೆ"** ಯಂತೆ, ರಾಜ್ಯದ ಎಲ್ಲಾ 27 ಜಿಲ್ಲಾ ಕೇಂದ್ರಗಳಲ್ಲಿ ಹಾಗೂ ಕಾಲಕ್ರಮೇಣ ಎಲ್ಲಾ 175 ತಾಲ್ಲೂಕು ಕೇಂದ್ರಗಳಲ್ಲಿ ಮಹಿಳಾ ಪೋಲಿಸ್ ಠಾಣೆಯಲ್ಲೂ ಮಹಿಳಾ ಅಧಿಕಾರಿಗಳಿರಬೇಕು, ಪೋಲಿಸ್ ಇಲಾಖೆಯ ಎಲ್ಲಾ ಉನ್ನತ ಹುದ್ದೆಗಳಲ್ಲಿ ಕನಿಷ್ಠ ಶೇ 33 ರಷ್ಟು ಹುದ್ದೆಗಳನ್ನು ಮಹಿಳೆಯರಿಗೆ ಮೀಸಲಾಗರಿಸಬೇಕು, ಪೋಲಿಸ್ ಇಲಾಖೆಯ ಎಲ್ಲಾ ಹಂತದ ಎಲ್ಲಾ ಸಿಬ್ಬಂದಿ ವರ್ಗದವರಿಗೆ ಲಿಂಗ ಸಮಾನತೆಯ ವಿಷಯವಾಗಿ ತರಬೇತಿಯಾಗಬೇಕು, ಮಹಿಳೆಯರ ಮೇಲಾಗುವ ಅತ್ಯಾಚಾರ ಹಾಗೂ ದೌರ್ಜನ್ಯಕ್ಕೆ ಸಂಬಂಧಪಟ್ಟಂತೆ ಪೋಲಿಸ್ ಠಾಣೆಗಳಲ್ಲಿ ದೂರುಗಳನ್ನು ತೆಗೆದುಕೊಳ್ಳದಿದ್ದಾಗ ಸಂಬಂಧಪಟ್ಟ ಪೋಲಿಸ್ ಅಧಿಕಾರಿಗಳಿಗೆ ಶಿಕ್ಷೆಯಾಗಬೇಕು, ಅತ್ಯಾಚಾರ ಮತ್ತು ದೌರ್ಜನ್ಯಕ್ಕೆ ಒಳಗಾದ ಮಹಿಳೆಯರು ಸಮೀಪದಲ್ಲಿರುವ ಯಾವುದೇ ಪೋಲಿಸ್ ಠಾಣೆಯಲ್ಲಿ ದೂರುಗಳನ್ನು ನೀಡಿದಾಗ, ಇವುಗಳನ್ನು ನೋಂದಣಿ ಮಾಡಿಕೊಳ್ಳಬೇಕು.

4. ಗಂಡ ಬಿಟ್ಟ ಮಹಿಳೆಯರಿಗೆ ಹಾಗೂ ಅವರ ಮಕ್ಕಳಿಗೆ ಮತ್ತು ಅತ್ಯಾಚಾರಕ್ಕೊಳಗಾದ ಮಹಿಳೆಯರಿಗೆ ಹಾಗೂ ಬಾಲಕಿಯರಿಗೆ ಈಗಿರುವ 11 ರಾಜ್ಯ ಕೇಂದ್ರಗಳಲ್ಲಿ, 13 ಅಲ್ಪಾವಧಿ ವಸತಿ ಗೃಹಗಳು ಹಾಗೂ 8 ಸ್ವೀಕಾರ ಕೇಂದ್ರಗಳ ಸೌಲಭ್ಯವನ್ನು ವಿಸ್ತರಿಸಿ, ಇಂತಹ ವ್ಯಕ್ತಿಗಳಿಗೆ ಸೂಕ್ತವಾದ ಸಲಹಾ ಕೇಂದ್ರಗಳನ್ನು ಪ್ರಾರಂಭಿಸಿ, ಕ್ರಮೇಣ ಅವರು ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ನೆರವಾಗಬೇಕು. ಈ ಬಗ್ಗೆ ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚಿನ ಪ್ರಚಾರವಾಗಬೇಕು. ಇದಲ್ಲದೇ ತಮ್ಮ ಸಮಸ್ಯೆಗಳಿಗೆ ಸಾಮಾಜಿಕ ಪರಿಹಾರಗಳನ್ನು ಕಂಡುಕೊಳ್ಳಲು ವಿಫಲರಾದ ಮಹಿಳೆಯರಿಗೆ ಶಾಶ್ವತ ಪುನರ್ವಸತಿ ಗೃಹಗಳನ್ನು ನಿರ್ಮಿಸಿ, ಅವರ ಆರ್ಥಿಕ ಸ್ವಾವಲಂಬನೆಗಾಗಿ ಸೂಕ್ತ ತರಬೇತಿ ನೀಡಬೇಕು.

5. 1984ರ ಕುಟುಂಬ ನ್ಯಾಯಾಲಯಗಳ ಕಾನೂನಿನಂತೆ (The Family Court Act 1984 )ಪ್ರತಿ ಹತ್ತು ಲಕ್ಷ ಜನಸಂಖ್ಯೆಗೆ ಒಂದು ಕುಟುಂಬ ನ್ಯಾಯಾಲಯವಿರಬೇಕೆಂದಿದ್ದಾಗ್ಯೂ, ಕರ್ನಾಟಕ ರಾಜ್ಯದಲ್ಲಿ ಕೇವಲ 8 (ಬೆಂಗಳೂರು 4, ಮೈಸೂರು 1, ರಾಯಚೂರು 1, ಗುಲಬರ್ಗಾ 1, ಬಿಜಾಪುರ1) ಕುಟುಂಬ ನ್ಯಾಯಾಲಯಗಳಿರುವುದರಿಂದ ಅತ್ಯಧಿಕ ಸಂಖ್ಯೆಯ ಮಹಿಳೆಯರಿಗೆ ಕುಟುಂಬ ನ್ಯಾಯಾಲಯಗಳ ಸೌಲಭ್ಯ ದೊರಕುತ್ತಿಲ್ಲದಿರುವುದರಿಂದ, ನೊಂದ ಮಹಿಳೆಯರಿಗೆ ತ್ವರಿತವಾಗಿ ಪರಿಹಾರ ದೊರಕಿಸುವ ಸಲುವಾಗಿ ಪ್ರತಿ 10 ಲಕ್ಷ ಜನರಿಗೆ ಕುಟುಂಬ ನ್ಯಾಯಾಲಯಗಳನ್ನು ಸ್ಥಾಪಿಸಿ, ಹೆಚ್ಚಿನ ಮಹಿಳಾ ನ್ಯಾಯಾಧೀಶರನ್ನು ನೇಮಿಸಬೇಕು ಹಾಗೂ ಈ ನ್ಯಾಯಾಲಯಗಳಲ್ಲಿರುವ ಮನೋವಿಜ್ಞಾನದ ಹಿನ್ನೆಲೆ ಹೊಂದಿರುವ ಸಲಹೆಗಾರರ ಸಂಖ್ಯೆಯನ್ನು ಹೆಚ್ಚಿಸಬೇಕು.

6. ಎಲ್ಲಾ ಅಂತರ್ಜಾತಿಯ ವಿವಾಹಕ್ಕೆ ಸಂಬಂಧಪಟ್ಟಂತೆ ಇರುವ ಸರ್ಕಾರದ ಯೋಜನೆಗಳು ಕೆಲವೇ ಪಂಗಡಗಳಿಗೆ ಮೀಸಲಾಗಿರದೆ ಎಲ್ಲಾ ಅಂತರ್ಜಾತಿಯ ಹಾಗೂ ಅಂತರ್ಮತಿಯ ವಿವಾಹಗಳಿಗೆ ಅನ್ವಯಿಸುವಂತಾಗಬೇಕು ಮತ್ತು ಈ ಬಗ್ಗೆ ಗ್ರಾಮಾಂತರ ಹಾಗೂ ನಗರ ಪ್ರದೇಶಗಳಲ್ಲಿ ಹೆಚ್ಚಿನ ಪ್ರಚಾರವಾಗಬೇಕು ಹಾಗೂ ಇದಕ್ಕಾಗಿ ನಿಗಧಿತವಾದ ಮೊತ್ತವನ್ನು ಹೆಚ್ಚಿಸಬೇಕು, ಹೀಗೆಯೇ ಏಕ ಪತ್ನಿ ಪದ್ಧತಿಯನ್ನು ಭದ್ರ ಪಡಿಸುವ ಸಲುವಾಗಿ

ಕಾನೂನುಬದ್ಧ ಕ್ರಮಗಳ ಅನುಷ್ಠಾನವನ್ನು ಕಠಿಣವಾಗಿ ಜಾರಿಗೊಳಿಸಬೇಕು. ಈ ಪ್ರಕ್ರಿಯೆಗಳನ್ನು ಸಬಲಗೊಳಿಸುವ ಸಲುವಾಗಿ ರಾಜ್ಯದಲ್ಲಿ ನಡೆಯುವ ಎಲ್ಲಾ ಮದುವೆಗಳ ನೋಂದಣಿಯನ್ನು ಖಡ್ಡಾಯ ಮಾಡುವುದಲ್ಲದೆ, ನೋಂದಣಿ ಮಾಡುವ ಕ್ರಿಯೆ ಸರಳವಾಗಬೇಕು ಇದರಿಂದ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳಿಗೆ ಮದುವೆ ಮಾಡುವುದೂ ಕಡಿಮೆಯಾಗುತ್ತದೆ.

7. ಮಹಿಳಾ ಕಾನೂನು ಜಾಗೃತ ಶಿಬಿರಗಳನ್ನು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಹೆಚ್ಚು ಗ್ರಾಮಗಳಿಗೆ ಮತ್ತು ನಗರದ ಹಿಂದುಳಿದ ಜನರು ವಾಸಿಸುವ ಪ್ರದೇಶಗಳಿಗೆ ವಿಸ್ತರಿಸಿದರೆ, ಕುಟುಂಬಗಳಲ್ಲಿ, ಶಾಲಾ ಕಾಲೇಜುಗಳಲ್ಲಿ, ಹಾಗೂ ಸಾರ್ವತ್ರಿಕ ಪ್ರದೇಶಗಳಲ್ಲಿ ಹಿಂಸೆ ಮತ್ತು ಅತ್ಯಾಚಾರಕ್ಕೊಳಗಾದ ಮಹಿಳೆಯರು ಸೂಕ್ತವಾದ ಕಾನೂನಿನ ಸಹಾಯ ಪಡೆಯಲು ಅನುಕೂಲವಾಗುವುದಲ್ಲದೇ ಕ್ರಮೇಣ ಇಂತಹ ಅತ್ಯಾಚಾರಗಳು ಕಡಿಮೆಯಾಗುವ ಸಾಧ್ಯತೆ ಇದೆ.

ಇದಕ್ಕೆ ಪೂರಕವಾಗಿ ಸ್ಥಳೀಯ ನಾಗರಿಕರ ಸಹಾಯದಿಂದ ಸಾಮಾಜಿಕ ಪೋಲಿಸ್ ವ್ಯವಸ್ಥೆ (Community Policing)ಗೆ ಉತ್ತೇಜನ ಕೊಟ್ಟು, ಅತ್ಯಾಚಾರ ಮತ್ತು ದೌರ್ಜನ್ಯಕ್ಕೊಳಪಟ್ಟಂತೆ ಪೋಲಿಸ್ ಸಿಬ್ಬಂದಿಗಿರುವ ಅಧಿಕಾರವನ್ನು ಈ ನಾಗರಿಕ ತಂಡಗಳಿಗೆ ನೀಡಿದರೆ, ಮಹಿಳೆಯರ ಸುರಕ್ಷಿತತೆ ಭದ್ರವಾಗುವುದಲ್ಲದೇ ಪೋಲಿಸ್ ಇಲಾಖೆಯ ಮೇಲಿನ ಕೆಲಸದ ಒತ್ತಡ ಕಡಿಮೆಯಾಗುತ್ತದೆ.

8. ಶಿಕ್ಷಣ ಸಂಸ್ಥೆಗಳ ಹತ್ತಿರ ಶೇಂಧಿ, ಗುಟಕ ಮುಂತಾದ ವಸ್ತುಗಳ ಮಾರಾಟ ನಿಷೇಧವಾಗಬೇಕು ಮತ್ತು ಶಿಕ್ಷಣ ಸಂಸ್ಥೆಗಳ ಹತ್ತಿರ ಇರುವಂತಹ ಇಂತಹ ಅಂಗಡಿಗಳನ್ನು ತ್ವರಿತವಾಗಿ ತೆಗಿಸಬೇಕು. ಈ ವಿಷಯದಲ್ಲಿ ಸರ್ಕಾರ ಮೃದು ನೀತಿಯನ್ನು ಬಿಟ್ಟು ಕಠಿಣ ನೀತಿಯನ್ನು ಪರಿಪಾಲಿಸಬೇಕು.

9. ರಾಜ್ಯದಲ್ಲಿ ಕ್ರಮೇಣವಾಗಿ ದೇವದಾಸಿ ಪದ್ಧತಿಯನ್ನು ನಿರ್ಮೂಲನೆ ಮಾಡುವ ಸಲುವಾಗಿ, ದೇವದಾಸಿ ಪದ್ಧತಿಯ ವಿರುದ್ಧ ಶೈಕ್ಷಣಿಕ ಕಾರ್ಯಕ್ರಮಗಳನ್ನು ಯೋಜಿಸಿ ಈ ಪದ್ಧತಿ ಇರುವ ಕಡೆಗಳಲ್ಲಿ ಸಾರ್ವಜನಿಕವಾಗಿ ಶಿಕ್ಷಣ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಬೇಕು, ಏಡ್ಸ್‌ನ್ನು (AIDS) ಒಳಗೊಂಡಂತೆ ಲೈಂಗಿಕ ಸಂಪರ್ಕ ಜಾಡ್ಯಗಳ (STD) ಬಗ್ಗೆ ದೇವದಾಸಿ ಮತ್ತು ವೃತ್ತಿ ನಿರತ ಲೈಂಗಿಕ ಕಾರ್ಯಕರ್ತರಿಗೆ ಹೆಚ್ಚಿನ ತಿಳುವಳಿಕೆ ನೀಡಬೇಕು, ದೇವದಾಸಿಯರ ಆರೋಗ್ಯ ಸುಧಾರಿಸುವ ಬಗ್ಗೆ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಳ್ಳಬೇಕು, ಇದಕ್ಕೆ ಪೂರಕವಾಗಿ ಪ್ರತಿ ತಾಲ್ಲೂಕಿನಲ್ಲಿ ಎಲ್ಲಾ ಸೌಲಭ್ಯಗಳನ್ನೊಳಗೊಂಡ ಸಂಚಾರಿ ಆಸ್ಪತ್ರೆಯನ್ನು ಸ್ಥಾಪಿಸಬೇಕು ಪ್ರಾಯೋಗಿಕವಾಗಿ ಪ್ರತಿ ಜಿಲ್ಲೆಯಲ್ಲೂ ಒಂದೊಂದು ತಾಲ್ಲೂಕನ್ನು ಆರಿಸಿ ಇಂತಹ ಸಂಚಾರಿ ಆಸ್ಪತ್ರೆಯ ಕಾರ್ಯಕ್ರಮವನ್ನು 2001ನೇ ಇಸವಿಯ ಕೊನೆಯ ಹೊತ್ತಿಗೆ ಪ್ರಾರಂಭಿಸಿ, ಈ ಅನುಭವದ ಆದಾರದ ಮೇಲೆ ಪ್ರತಿ ವರ್ಷ ದೇವದಾಸಿಯರು ಹೆಚ್ಚಿರುವ ಎಲ್ಲಾ ತಾಲ್ಲೂಕುಗಳಿಗೂ ವಿಸ್ತರಿಸಬೇಕು.

ಇದರ ಜೊತೆ ಜೊತೆಗೆ ವೃತ್ತಿನಿರತ ದೇವದಾಸಿಯರ ಹಾಗೂ ದೇವದಾಸಿ ಪದ್ಧತಿಯಿಂದ ವಿಮೋಚನೆಗೊಂಡ ಮಹಿಳೆಯರಿಗೆ ಆರ್ಥಿಕವಾಗಿ ಸಹಾಯವಾಗುವಂತಹ ಗೃಹ ಕೈಗಾರಿಕೆಗಳ ಬಗ್ಗೆ ತರಬೇತಿ ನೀಡಬೇಕು ಹಾಗೂ ತರಬೇತಿಯ ನಂತರ ಇವರಿಗೆ ಸ್ವಯಂ ಉದ್ಯೋಗ ಕೈಗೊಳ್ಳಲು ಆರ್ಥಿಕ ನೆರವು ನೀಡಬೇಕು ಹಾಗೂ ಇಂತಹ ಮಹಿಳೆಯರಿಗೆ ಸರ್ಕಾರದ ಅನುಪಯುಕ್ತ ಜಾಗ (Waste Land)ಗಳನ್ನು ನೀಡಿ ಅವರು ಕೃಷಿ ಮತ್ತು ತೋಟಗಾರಿಕೆ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಲು ಆರ್ಥಿಕ ನೆರವು ನೀಡಬೇಕು.

# 6. ರಾಜಕೀಯದಲ್ಲಿ ಮಹಿಳಾ ಸಶಕ್ತೀಕರಣ

ಸ್ವಾತಂತ್ರ್ಯ ಚಳುವಳಿಯಲ್ಲಿ ಅನೇಕ ಮಹಿಳೆಯರು ಭಾಗವಹಿಸಿದ್ದು ಇದರ ಪರಿಣಾಮವಾಗಿ ಭಾರತೀಯ ಸಂವಿಧಾನದಲ್ಲಿ ಲಿಂಗ ಸಮಾನತೆಯನ್ನು ಕಾಣಬಹುದು, ಪ್ರಪಂಚದ ಕೆಲವೇ ರಾಷ್ಟ್ರಗಳ ಸಂವಿಧಾನಗಳಲ್ಲಿ ಲಿಂಗ ಸಮಾನತೆ ಇದ್ದು ಭಾರತವು ಇಂತಹ ದೇಶಗಳಲ್ಲಿ ಒಂದು ಎಂಬುದು ಹೆಮ್ಮೆ ಪಡಬೇಕಾದ ವಿಷಯ. ಇದರ ಪರಿಣಾಮವಾಗಿ ಮಹಿಳೆಯರು ರಾಜ್ಯಪಾಲರ ಹುದ್ದೆಯಲ್ಲೂ, ಅತ್ಯಂತ ಹಿಂದುಳಿದ ಜನಾಂಗದ ಮಹಿಳೆಯರು ಮುಖ್ಯ ಮಂತ್ರಿ ಪದವಿಯನ್ನೂ ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿ ಸಚಿವರ ಸ್ಥಾನವನ್ನೂ ಮತ್ತು ಉನ್ನತ ನ್ಯಾಯಾಲಯಗಳಲ್ಲಿ ನ್ಯಾಯಾಧೀಶರ ಸ್ಥಾನವನ್ನು ಪಡೆಯಲು ಸಾಧ್ಯವಾಗಿದೆ.

ಹೀಗಿದ್ದಾಗ್ಯೂ 1976 ರಲ್ಲಿ ರಚನೆಗೊಂಡ ಮಹಿಳೆಯರಿಗಾಗಿ ರಾಷ್ಟ್ರೀಯ ಕ್ರಿಯಾ ಯೋಜನೆ (National Plan of Action for Women 1976)ಯಲ್ಲಿ ರಾಜಕೀಯವಾಗಿ ಮಹಿಳೆಯರ ಪಾಲುಗಾರಿಕೆ ಬಗ್ಗೆ ಏನನ್ನೂ ಉಲ್ಲೇಖಿಸದೆ ಕೇವಲ ಮಹಿಳಾ ಶಿಕ್ಷಣ, ಆರೋಗ್ಯ ಮತ್ತು ಉದ್ಯೋಗಗಳ ಬಗ್ಗೆ ಮಾತ್ರ ಉಲ್ಲೇಖಿಸಲಾಗಿತ್ತು ಆದರೆ 1985ರಲ್ಲಿ ನೈರೋಬಿಯದಲ್ಲಿ ನಡೆದ ಅಲಿಪ್ತ ಸಮ್ಮೇಳನಕ್ಕಾಗಿ ತಯಾರಿಸಿದ ರಾಷ್ಟ್ರೀಯ ದಾಖಲೆಯಲ್ಲಿ, ರಾಜಕೀಯದಲ್ಲಿ ಮಹಿಳಾ ಪ್ರಾತಿನಿಧ್ಯದ ಅವಶ್ಯಕತೆ ಮತ್ತು ಅದಕ್ಕೆ ಸೂಕ್ತವಾದ ನೀತಿಯನ್ನು ಉಲ್ಲೇಖಿಸಲಾಗಿತ್ತು. ಅನಂತರ, ಇದರ ಆಧಾರದ ಮೇಲೆ ಅನೇಕ ರಾಷ್ಟ್ರೀಯ ವೇದಿಕೆಗಳಲ್ಲಿ ರಾಜಕೀಯದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯ ಬಗ್ಗೆ ಪದೇ ಪದೇ ಪ್ರತಿಬಿಂಬಿಸಲಾಗುತ್ತಿತ್ತು. ಇವುಗಳ ಪರಿಣಾಮವಾಗಿ ಕರ್ನಾಟಕವು ಸೇರಿದಂತೆ ಅನೇಕ ರಾಜ್ಯಗಳಲ್ಲಿ ರಾಜಕೀಯದಲ್ಲಿ ಮಹಿಳಾ ಪ್ರಾತಿನಿಧ್ಯದ ಬಗ್ಗೆ ಸಕ್ರಿಯವಾಗಿ ಚರ್ಚೆಗಳಾಗುತ್ತಲಿ ಇವೆ ಆದರೂ ಸಹ ಮಹಿಳೆಯರನ್ನು ಬಹುತೇಕ ರಾಜಕೀಯ ಪಕ್ಷಗಳಲ್ಲಿ ಮುಖ್ಯ ಭೂಮಿಕೆಯಲ್ಲಿ ಸೇರಿಸದೆ ಕೇವಲ ಚಿಕ್ಕ ಪುಟ್ಟ ಸ್ಥಾನಗಳಲ್ಲಿ ಹೆಸರಿಗೆ ಮಾತ್ರ ಸೇರಿಸಲಾಗಿದೆ. ಹೀಗಾಗಿ ಕರ್ನಾಟಕದ ರಾಜಕೀಯದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಇನ್ನೂ ಹೆಚ್ಚಾಗಬೇಕಾಗಿದೆ.

1956 ರಲ್ಲಿ ಕರ್ನಾಟಕ ರಾಜ್ಯ ಸ್ಥಾಪನೆಯಾದಗಿನಿಂದ ಇಲ್ಲಿಯವರೆಗೆ ವಿಧಾನ ಮಂಡಲಗಳಲ್ಲಿ ಸರ್ಕಾರದ ಅನೇಕ ನಿಗಮ ಮತ್ತು ಮಂಡಲಿಗಳಲ್ಲಿ ಮಹಿಳಾ ಪ್ರಾತಿನಿಧ್ಯ ಇಲ್ಲದಿರುವುದು ಅಂತಹ ಪ್ರಾತಿನಿಧ್ಯವಿದ್ದ ಕಡೆ ಮಹಿಳೆಯರ ಸಂಖ್ಯೆ ಅತ್ಯಂತ ಕಡಿಮೆ ಇರುವುದು ಸರ್ವವಿಧಿತ.

ರಾಜ್ಯ ವಿಧಾನ ಸಭೆ ಮತ್ತು ರಾಜ್ಯದಿಂದ ಆಯ್ಕೆಗೊಂಡ ಲೋಕಸಭಾ ಸದಸ್ಯರುಗಳಿಗೆ ಸಂಬಂಧಪಟ್ಟ ಅಂಕಿ ಅಂಶಗಳನ್ನು (ಅನುಬಂಧ - 13) ಅವಲೋಕನೆ ಮಾಡಿದಾಗ ರಾಜಕೀಯವಾಗಿ ಮಹಿಳೆಯರ ಪಾಲುಗಾರಿಕೆ ಕಡೆಗಾಣಿಸಲ್ಪಡುವಷ್ಟು ಕಡಿಮೆಯಾಗಿರುವುದು ವಿಧಿತವಾಗುತ್ತದೆ. ಹೀಗೆಯೇ ಹಿರಿಯರ ಸಭೆಗಳೆಂದು ಗುರುತಿಸಲ್ಪಟ್ಟಿರುವ ವಿಧಾನ ಪರಿಷತ್ ಹಾಗೂ ರಾಜ್ಯ ಸಭೆ ಸದಸ್ಯರುಗಳಿಗೆ ಸಂಬಂಧಪಟ್ಟಂತೆ ಕರ್ನಾಟಕ ರಾಜ್ಯದ ಅಂಕಿ ಅಂಶಗಳನ್ನು (ಅನುಬಂಧ - 14) ಅಭ್ಯಾಸ ಮಾಡಿದಾಗ ರಾಜಕೀಯದಲ್ಲಿ ಮಹಿಳೆಯರ ಸ್ಥಾನ ಎಷ್ಟು ಹಿಂದಿದೆ ಎಂಬುದು ತಿಳಿಯುತ್ತದೆ. ಪದವೀಧರ ಕ್ಷೇತ್ರದಿಂದ, ರಾಜ್ಯದಲ್ಲಿ ಹೆಚ್ಚಿನ ಜನ ಉತ್ತಮ ಶಿಕ್ಷಕಿಯರಿದ್ದರೂ, ಶಿಕ್ಷಕರ ಕ್ಷೇತ್ರದಿಂದ ಹಾಗೂ ಸ್ಥಳೀಯ ಪ್ರಾಧಿಕಾರಗಳಲ್ಲಿ ಶೇ 33 ಮಹಿಳೆಯರಿರಬೇಕೆಂದು ಕರ್ನಾಟಕದ ಸರ್ಕಾರವು ದೇಶದಲ್ಲೇ ಪ್ರಥಮವಾಗಿ ಕಾನೂನಿನ ಅನುಷ್ಠಾನಗೊಳಿಸಿದ್ದಾಗ್ಯೂ, ಸ್ಥಳೀಯ ಪ್ರಾಧಿಕಾರಗಳಿಂದ ಒಬ್ಬ ಮಹಿಳೆಯೂ ವಿಧಾನ ಪರಿಷತ್‌ಗೆ ಆಯ್ಕೆಗೊಳ್ಳದಿರುವುದು ಅತಿ ಶೋಚನೀಯ. ಅಲ್ಲದೆ ರಾಜ್ಯದಿಂದ ಚುನಾಯಿಸಲ್ಪಟ್ಟ 12 ರಾಜ್ಯ ಸಭಾ ಸ್ಥಾನಗಳಲ್ಲಿ ಕೇವಲ ಒಬ್ಬ ಮಹಿಳೆಯಿರುವುದು ರಾಜ್ಯದ ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರು ಇನ್ನೂ ಹೆಸರಿಗೆ ಮಾತ್ರ ಪ್ರಾತಿನಿಧ್ಯ ಪಡೆದಿದ್ದಾರೆ ಎಂಬುದಕ್ಕೆ ಕೈಗನ್ನಡಿಯಾಗಿದೆ.

ಈ ಪರಿಸ್ಥಿತಿಗೆ ಮಹಿಳೆಯರು ರಾಜಕೀಯವಾಗಿ ಸಶಕ್ತರಾಗಬೇಕೆನ್ನುತ್ತಿರುವ ಎಲ್ಲಾ ರಾಜಕೀಯ ಪಕ್ಷಗಳು ಹೊಣೆಯಾಗಿವೆ. ರಾಜಕೀಯ ಪಕ್ಷಗಳು ಮಹಿಳಾ ಅಭ್ಯರ್ಥಿಗಳನ್ನು ಚುನಾವಣೆಯಲ್ಲಿ ಸ್ಪರ್ಧಿಸಲು ಆಯ್ಕೆ ಮಾಡುವುದಕ್ಕೆ ಇನ್ನೂ ಹಿಂಜರಿಯುತ್ತಿವೆ. ಇದರ ಜೊತೆಗೆ ಚುನಾವಣೆಯ ಅಗಾಧವಾದ ಖರ್ಚು ಸ್ತ್ರೀಯರನ್ನು ಸ್ಪರ್ಧಿಸಲು ಅಧೈರ್ಯರನ್ನಾಗಿ ಮಾಡುತ್ತಿದೆ. ಚುನಾವಣೆಯ ಖರ್ಚು ಜಾಸ್ತಿ ಇರುವುದರಿಂದ ಜಾತಿ ಮತ್ತು ಆರ್ಥಿಕ ಪರಿಸ್ಥಿತಿಯಿಂದ ಹಿಂದುಳಿದ ವರ್ಗಗಳ ಪ್ರತಿಭಾನ್ವಿತ ಮಹಿಳೆಯರು ಚುನಾವಣೆಯಲ್ಲಿ ಸ್ಪರ್ಧಿಸಲಾರರು ತಮ್ಮ ತಮ್ಮ ಪಕ್ಷಗಳಲ್ಲಿ ಅಧಿಕಾರದಲ್ಲಿರುವ ಪುರುಷರ ಮನೋಧೋರಣೆ ಬದಲಾಗುವಂತಹ ಕಾರ್ಯಕ್ರಮಗಳನ್ನು ಎಲ್ಲಾ ರಾಜಕೀಯ ಪಕ್ಷಗಳು ಹಮ್ಮಿಕೊಂಡರೆ ರಾಜಕೀಯದಲ್ಲಿ ಮಹಿಳಾ ಸಶಕ್ತೀಕರಣ ಸುಲಭವಾಗುತ್ತದೆ ಹಾಗೂ ರಾಜಕೀಯ ಪಕ್ಷಗಳಲ್ಲಿ ಈಗಾಗಲೇ ಇರುವ ಮಹಿಳೆಯರು ಪಕ್ಷದ ಎಲ್ಲಾ ವೇದಿಕೆಗಳಲ್ಲಿ ಮಹಿಳೆಯರ ಪ್ರಾತಿನಿಧ್ಯದ ಬಗ್ಗೆ ಮತ್ತು ತಮ್ಮ ಹಕ್ಕಿನ ಬಗ್ಗೆ ಸದಾ ಜಾಗೃತರಾಗಿದ್ದು ಪಕ್ಷದಲ್ಲಿ ಮಹಿಳೆಯರಿಗೆ ಮೀಸಲಾಗಿರುವ ಎಲ್ಲಾ ಸವಲತ್ತುಗಳ ಬಗ್ಗೆ ಎಚ್ಚರಿಕೆ ವಹಿಸಬೇಕು. ಈ ಬಗ್ಗೆ ಸಂಬಂಧಪಟ್ಟ ಮಹಿಳಾ ರಾಜಕೀಯ ಕಾರ್ಯಕರ್ತರು ತಮ್ಮ ತಮ್ಮ ಪಕ್ಷಗಳ ವೇದಿಕೆಗಳಲ್ಲಿ ಸತತವಾಗಿ ಪ್ರಶ್ನೆ ಮಾಡುತ್ತಿರಬೇಕು ಕೆಲವು ರಾಷ್ಟ್ರೀಯ ಪಕ್ಷಗಳು ಮಹಿಳೆಯರಿಗೆ ಕೆಲವು ಹುದ್ದೆಗಳನ್ನು ಮೀಸಲಿಟ್ಟಿದ್ದರೂ ಸಹ ಅವುಗಳ ಅನುಷ್ಠಾನದಲ್ಲಿ ನಿಯಮಗಳನ್ನು ಪದೇ ಪದೇ ಗಾಳಿಗೆ ತೂರಿವೆ. 2001ರ ಗಣತಂತ್ರ ದಿನದ ಆಚರಣೆಗೆ ಪೂರ್ವಭಾವಿಯಾಗಿ ಮಾಡಿದ ತಮ್ಮ ಭಾಷಣದಲ್ಲಿ ರಾಷ್ಟ್ರಪತಿಗಳಾದ ಶ್ರೀ ಕೆ.ಆರ್. ನಾರಾಯಣನ್‌ರವರು, ತಮ್ಮ ತಮ್ಮ ಪಕ್ಷಗಳಲ್ಲಿ ಎಲ್ಲಾ ನಿರ್ಧಾರ ತೆಗೆದುಕೊಳ್ಳುವ ವೇದಿಕೆಗಳಲ್ಲಿ ಶೇಕಡ 33 ರಷ್ಟನ್ನು ಮಹಿಳೆಯರಿಗೆ ಮೀಸಲಿಡಬೇಕೆಂದು, ಎಲ್ಲಾ ರಾಜಕೀಯ ಪಕ್ಷಗಳಿಗೂ ಕರೆ ನೀಡಿರುವುದು ಸ್ವಾಗತಾರ್ಹ.

ಕರ್ನಾಟಕ ರಾಜ್ಯದಲ್ಲಿ ಜಿಲ್ಲಾ ಪರಿಷತ್, ತಾಲ್ಲೂಕ್ ಪಂಚಾಯತ್, ಗ್ರಾಮ ಪಂಚಾಯತ್, ಪುರಸಭೆ ಹಾಗೂ ನಗರ ಪಾಲಿಕೆಗಳಲ್ಲಿ ಮಹಿಳೆಯರಿಗಾಗಿ ಕೆಲವು ಸ್ಥಾನಗಳನ್ನು ಇತ್ತೀಚೆಗೆ ಮೀಸಲಾಗಿಟ್ಟಿರುವುದರಿಂದ, ತಮ್ಮ ಹೊಸ ಕರ್ತವ್ಯಕ್ಕೆ ಹೊಂದಿಕೊಳ್ಳಲು ಅವರಿಗೆ ಸ್ವಲ್ಪ ಕಾಲಾವಕಾಶ ಬೇಕಾಗುತ್ತದೆ ಇದಕ್ಕೆ ಪೂರಕವಾಗಿ ತಮ್ಮ ಅಧಿಕಾರದ ವ್ಯಾಪ್ತಿ, ಹಕ್ಕು ಮತ್ತು ಕರ್ತವ್ಯಗಳು ಸರ್ಕಾರದ ವಿವಿಧ ಯೋಜನೆಗಳು ಮುಂತಾದ ವಿಷಯಗಳ ಮೇಲೆ ತರಬೇತಿ ನೀಡುವುದು ಉತ್ತಮ ಜೊತೆಗೆ ಚುನಾವಣೆಯ ಪೂರ್ವದಲ್ಲಿಯೇ ಮಹಿಳಾ ರಾಜಕಾರಣಿಗಳಿಗೆ ಈ ವಿಷಯಗಳ ಬಗ್ಗೆ ತಿಳುವಳಿಕೆ ಮೂಡಿಸುವುದು ಅತ್ಯುತ್ತಮ.

ಮಹಿಳಾ ಪ್ರತಿನಿಧಿಗಳು ಸಂಸತ್ತಿನಲ್ಲಾಗಲಿ ಅಥವಾ ವಿಧಾನಸಭೆ/ಪರಿಷತ್ತಿನಲ್ಲಾಗಲಿ ಚರ್ಚೆಯಲ್ಲಿ ಸಕ್ರಿಯವಾಗಿ ಭಾಗವಹಿಸುವುದಿಲ್ಲ ಅಥವಾ ಹೀಗೆ ಭಾಗವಹಿಸಿದರೆ ಕೇವಲ ಶಿಕ್ಷಣ, ಆರೋಗ್ಯ, ಆಹಾರ ಮುಂತಾದ ಕೆಲವು ಸೀಮಿತ ವಿಷಯಗಳಲ್ಲಿ ಮಾತ್ರ ಮಾತನಾಡುತ್ತಾರೆ ಎಂಬ ದೂರಿನಲ್ಲಿ ಹುರುಳಿಲ್ಲ. ಇತ್ತೀಚೆಗೆ ಮಹಿಳಾ ಸದಸ್ಯರು ರಾಷ್ಟ್ರಕ್ಕೆ ಅಥವಾ ರಾಜ್ಯಕ್ಕೆ ಸಂಬಂಧ ಪಟ್ಟ ಎಲ್ಲಾ ವಿಷಯಗಳ ಮೇಲೆ ಚರ್ಚೆ ನಡೆದಾಗ ಸಕ್ರಿಯವಾಗಿ ಭಾಗವಹಿಸಿ ಉತ್ತಮ ಸಲಹೆಗಳನ್ನು ನೀಡುತ್ತಿರುವುದು ಗಮನಾರ್ಹ ಹೀಗೆಯೇ ರಾಜಕಿಯ ಪಕ್ಷಗಳ ಮಹಿಳಾ ಪ್ರತಿನಿಧಿಗಳು ದೂರದರ್ಶನ ಮತ್ತು ಇತರ ಚಾನೆಲ್‌ಗಳಲ್ಲಿ ತಮ್ಮ ಪಕ್ಷಗಳನ್ನು ಪ್ರತಿನಿಧಿಸುವಾಗ ಅತ್ಯುತ್ತಮವಾಗಿ ವಾದ ಮಾಡಿರುವುದು ಸರ್ವ ವಿಧಿತ.

ಪರಿಸರ ರಕ್ಷಣೆ, ಬೆಲೆ ಏರಿಕೆ, ಪಾನ ನಿರೋಧ ಮುಂತಾದ ವಿಷಯಗಳಿಗೆ ಸಂಬಂಧಪಟ್ಟ ಸಾಮಾಜಿಕ ಚಳುವಳಿಗಳಲ್ಲಿ ರಾಜ್ಯದ ವಿವಿಧೆಡೆಗಳಲ್ಲಿ ಮಹಿಳೆಯರು ಭಾಗವಹಿಸಿ ಸರ್ಕಾರದ ಮತ್ತು ಸಮಾಜದ ಗಮನ ಸೆಳೆದಿದ್ದು ಮಹಿಳಾ ಸಂಘಟನೆಯು ಪ್ರಬಲವಾಗುವ ದಿಕ್ಕಿನಲ್ಲಿ ತಮ್ಮ ಪ್ರಭಾವವನ್ನು ಬೀರಿದ್ದಾರೆ.

ನ್ಯಾಯಾಂಗದ ಹುದ್ದೆಗಳನ್ನು ಭರ್ತಿ ಮಾಡುವಾಗ ರಾಜ್ಯದಲ್ಲಿ ಅನೇಕ ಅನುಭವಿ ಮಹಿಳಾ ನ್ಯಾಯಾಧೀಶರು ಮತ್ತು ವಕೀಲರು ಇದ್ದರೂ ಸಹ ಅವರನ್ನು ಕಡೆಗಣಿಸಿ ಪುರುಷ ನ್ಯಾಯಾಧೀಶರಿಗೆ ಮತ್ತು ವಕೀಲರಿಗೆ ಹೆಚ್ಚಿನ

ಸ್ಥಾನ ನೀಡಿರುವುದು ಇತ್ತೀಚಿನ ವರದಿಗಳಿಂದ ಸ್ಪಷ್ಟವಾಗಿದೆ.

ಕರ್ನಾಟಕದಲ್ಲಿ ಕಾರ್ಮಿಕ ಸಂಘ ಸಂಸ್ಥೆಗಳು ಪ್ರಬಲವಾಗಿದ್ದರೂ ಸಹ ಇವುಗಳಲ್ಲಿ ಪುರುಷರೇ ಪ್ರಧಾನ ಪಾತ್ರವಹಿಸುತ್ತಿರುವುದು ಮಹಿಳೆಯರ ಸಂಖ್ಯೆ ಕಡೆಗಾಣಿಸಬಹುದಾದಷ್ಟು ಕಡಿಮೆ ಇದೆ ಹಾಗೂ ಮಹಿಳಾ ಕಾರ್ಮಿಕ ಸಂಘ ಸಂಸ್ಥೆಗಳ ಸಂಖ್ಯೆ ಅತಿ ಕಡಿಮೆ ಇದ್ದು ಇವುಗಳು ಪ್ರಭಾವಯುತವಾಗುವ ಅವಶ್ಯಕತೆ ಬಹಳಷ್ಟು ಇದೆ.

ಮಹಿಳೆಯರಿಗಾಗಿ ದುಡಿಯುತ್ತಿರುವ ಸ್ಥಳೀಯ ಹಾಗೂ ಪ್ರಾಂತೀಯ ಸ್ವಯಂ ಸೇವಾ ಸಂಸ್ಥೆಗಳು ರಾಜಕೀಯದಲ್ಲಿ ಮಹಿಳೆಯರು ಭಾಗವಹಿಸುವುದರ ಬಗ್ಗೆ ಸಾಮಾಜಿಕ ಒತ್ತಡ ತರುವ ವೇದಿಕೆಗಳಾಗಬೇಕು ಜೊತೆಗೆ ಚುನಾವಣೆಯಲ್ಲಿ ಆಯ್ಕೆಗೊಂಡ ಮಹಿಳಾ ಪ್ರತಿನಿಧಿಗಳಿಗೆ ತಮ್ಮ ಕರ್ತವ್ಯವನ್ನು ನಿರ್ವಹಿಸಲು ಒತ್ತಡ ತರಬೇಕು ಹಾಗೂ ಮಹಿಳಾ ಸದಸ್ಯರು ತಮ್ಮ ಕರ್ತವ್ಯ ನಿರ್ವಹಿಸಲು ಅವಕಾಶ ಮಾಡಿಕೊಡುವಂತೆ ಪುರುಷ ಸದಸ್ಯರ ಮೇಲೂ ಒತ್ತಡ ತರಬೇಕು. ಇದರಂತೆಯೆ ಮುದ್ರಣ ಹಾಗೂ ಎಲೆಕ್ಟ್ರಾನಿಕ್ಸ್ ಮಾಧ್ಯಮಗಳು ಮಹಿಳಾ ಸದಸ್ಯರು ಮಾಡುವ ಸಾಮಾಜಿಕ ಕಾರ್ಯಗಳ ಬಗ್ಗೆ ಹೆಚ್ಚು ಪ್ರಚಾರಗೊಳಿಸಿದರೆ ಈ ಸದಸ್ಯರಿಗೆ ಇನ್ನೂ ಕೆಲಸ ಮಾಡಲು ಪ್ರೋತ್ಸಾಹದ ವಾತವರಣ ಉಂಟಾಗುತ್ತದೆ.

ಈ ಮುಂಚೆ ಹೇಳಿರುವಂತೆ ಭಾರತದ ಸಂವಿಧಾನದಲ್ಲಿ ಮಹಿಳೆಯರೆಂಬ ಕಾರಣದಿಂದ ಭೇದ ಮಾಡಬಾರದೆಂದಿದ್ದರೂ ಸಹ ಮಹಿಳೆಯರಿಗಾಗಿ ಮೀಸಲಾತಿ ಇರಬೇಕೆಂಬ ವಾದ ಮಾಡುವ ಸನ್ನಿವೇಶ ಉಂಟಾಗಿರುವುದೇ ದುರ್ದೈವ ಹೀಗಿದ್ದರೂ ಸಹ ಜಿಲ್ಲಾ ಮಟ್ಟದವರೆಗೆ ಮೀಸಲಾತಿಯನ್ನು ರಾಷ್ಟ್ರವು ಒಪ್ಪಿರುವುದರಿಂದ, ತರ್ಕಬದ್ಧವಾಗಿ ವಿಧಾನ ಸಭೆ/ಪರಿಷತ್ ಹಾಗೂ ಸಂಸತ್ತಿನವರೆಗೂ ಈ ಮೀಸಲಾತಿ ವಿಸ್ತಾರಗೊಳ್ಳಬೇಕು ಈ ಬಗ್ಗೆ ರಾಷ್ಟ್ರಾದ್ಯಂತ ಮಹಿಳೆಯರ ಧ್ವನಿ ಒಂದೇ ಆಗಬೇಕು.

ಇದರ ಜೊತೆಗೆ ರಾಷ್ಟ್ರೀಯ ಮಟ್ಟದಲ್ಲಿ ಸಂಸತ್ ಮತ್ತು ವಿಧಾನ ಸಭೆಗಳಲ್ಲಿ ಮಹಿಳೆಯರಿಗೆ ಸ್ಥಾನ ಮೀಸಲಾತಿಯ ಬಗ್ಗೆ ಲೋಕಸಭೆಯಲ್ಲಿ ಮಂಡಿಸಿರುವ ಸಂವಿಧಾನದ 84 ನೇಯ ತಿದ್ದುಪಡಿಗೆ ಸಂಬಂದಪಟ್ಟಂತೆ ಎಲ್ಲಾ ಹಂತಗಳಲ್ಲೂ ಸಾಮಾಜಿಕ ಪ್ರಜ್ಞೆಯನ್ನುಂಟು ಮಾಡಿ ಸಂಸತ್ತಿನ ಮೇಲೆ ಒತ್ತಡ ತರುವ ಅವಶ್ಯಕತೆ ಹೆಚ್ಚಾಗುತ್ತಿದೆ.

## ಪಂಚಾಯತ್ ರಾಜ್ ಪದ್ಧತಿಯಲ್ಲಿ ಮಹಿಳೆಯರು

1993ನೇ ಕಾಯ್ದೆ ಪ್ರಕಾರ ಜಿಲ್ಲಾ ಪರಿಷತ್, ತಾಲ್ಲೂಕು ಪಂಚಾಯತ್ ಮತ್ತು ಗ್ರಾಮ ಪಂಚಾಯಿತಿಗಳಲ್ಲಿ ಮಹಿಳೆಯರು ಆಸಕ್ತಿಯಿಂದ ಈ ಸ್ಥಾನಗಳಿಗೆ ಚುನಾಯಿತರಾಗಿದ್ದಾರೆ. ಇದಲ್ಲದೆ ಕೆಲವು ಪಂಚಾಯಿತಿಗಳಲ್ಲಿ ಸ್ತ್ರೀಯರು ಸಾಮಾನ್ಯ ಸ್ಥಾನಗಳಿಗೂ ಸ್ಪರ್ಧಿಸಿ ಗೆದ್ದಿರುವುದು ಸಂತೋಷದಾಯಕ. ಹೀಗೆ ಚುನಾಯಿತರಾದ ಮಹಿಳಾ ಸದಸ್ಯರಿಗೆ ಅನೇಕ ರೀತಿಯ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಲಾಗಿದ್ದು, ಈ ಮಹಿಳೆಯರು ತಮ್ಮ ತಮ್ಮ ಪಂಚಾಯಿತಿಗಳಲ್ಲಿ ಸಕ್ರಿಯ ಪಾತ್ರ ವಹಿಸುತ್ತಿದ್ದಾರೆ. ಚುನಾಯಿತರಾದ ಮಹಿಳೆಯರಿಗೆ ಅವರ ಕರ್ತವ್ಯ ಮತ್ತು ಹಕ್ಕುಗಳ ಬಗ್ಗೆ ಮತ್ತು ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಇಂತಹ ತರಬೇತಿ ಇನ್ನೂ ಪ್ರಬಲಗೊಳ್ಳಬೇಕು. ಕೆಲವು ಸ್ಥಳಗಳಲ್ಲಿ ಮಹಿಳಾ ಸದಸ್ಯರ ಪರವಾಗಿ ಆಕೆಯ ಕುಟುಂಬದ ಇತರ ಪುರುಷರು ಅಥವಾ ಆಕೆಯನ್ನು ಚುನಾವಣೆಯಲ್ಲಿ ಗೆಲ್ಲಲು ಕಾರಣರಾದ ಪುರುಷರು ಗ್ರಾಮ ಪಂಚಾಯಿತಿ ಸಭೆಗಳಲ್ಲಿ ಭಾಗವಹಿಸುವ ನಿದರ್ಶನಗಳೂ ಇವೆ. ವಿಶೇಷವಾಗಿ ಪರಿಶಿಷ್ಟ ಜಾತಿಯ ಮಹಿಳಾ ಸದಸ್ಯರಿಗೆ ಕಿರುಕುಳವಾಗುತ್ತಿರುವ ಬಗ್ಗೆ ಉದಾಹರಣೆಗಳಿವೆ. ಅದರಲ್ಲೂ ಚುನಾಯಿತ ಹುದ್ದೆಯ ಅವಧಿ ಮುಗಿದ ಮೇಲಂತೂ ಈ ಮಹಿಳೆಯರಿಗೆ ಹೆಚ್ಚಿನ ತೊಂದರೆಗಳಾಗುತ್ತಿವೆ.

ಎಲ್ಲಾ ಕ್ಷೇತ್ರಗಳಲೂ ಕುಟುಂಬದ ಪುರುಷರ ಸಹಾಯವು ಮಹಿಳೆಗೆ ಅತ್ಯಾವಶ್ಯಕವಾಗಿದೆ. ಅದರಲ್ಲೂ ರಾಜಕೀಯದಲ್ಲಿ ಭಾಗವಹಿಸುವ ಮಹಿಳೆಯರಿಗಂತೂ ಇಂತಹ ಸಹಾಯದ ಅವಶ್ಯಕತೆಯು ಇನ್ನೂ ಹೆಚ್ಚಿದೆ. ಆದ್ದರಿಂದ ಈ ವಿಷಯ ಕುರಿತು ಸಮಾಜದಲ್ಲಿ ಅನೇಕ ಜಾಗೃತ ಶಿಬಿರಗಳಾದರೆ ಕ್ರಮೇಣವಾಗಿ ರಾಜಕೀಯದಲ್ಲಿ ಪಾಲ್ಗೊಳ್ಳುವ

ಮಹಿಳೆಯರಿಗೆ ತಮ್ಮ ಕುಟುಂಬದ ಪುರುಷರಿಂದ ಸಹಾಯ ಸಿಗುವ ವಾತಾವರಣ ಉಂಟಾಗುತ್ತದೆ.

ಜಿಲ್ಲಾ ಪರಿಷತ್‌ನಲ್ಲಿ ವಿವಿಧ ಉಪ-ಸಮಿತಿಗಳಲ್ಲಿ ಮಹಿಳೆಯರನ್ನು ಹೆಸರಿಗೆ ಮಾತ್ರ ನೇಮಕಾತಿ ಮಾಡಲ್ಪಟ್ಟಿದ್ದು ಅವರು ಸಕ್ರಿಯವಾಗಿ ಭಾಗವಹಿಸುವ ವಾತಾವರಣ ಇನ್ನೂ ದುರ್ಬಲವಾಗಿದ. ವಿವಿಧ ಉಪ ಸಮಿತಿಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯನ್ನು ಹೆಚ್ಚು ಪ್ರಬಲಗೊಳಿಸಿ ಲಿಂಗಭೇದ ತೊಡೆದು ಹಾಕುವಂತಹ ಪರಿಸ್ಥಿತಿಯನ್ನು ಉಂಟು ಮಾಡುವುದು ಮತ್ತು ಮಹಿಳೆಯರ ಎಲ್ಲಾ ಕಾರ್ಯಕ್ರಮಗಳನ್ನು ಒಂದಕ್ಕೊಂದು ಪೂರಕವನ್ನಾಗಿ ಮಾಡುವುದು ಅತ್ಯವಶ್ಯಕ. ಈ ಕ್ರಿಯೆಯಲ್ಲಿ ಚುನಾವಣೆಯಲ್ಲಿ ಆಯ್ಕೆಗೊಂಡ ಮಹಿಳೆಯರನ್ನು ಸಶಕ್ತರನ್ನಾಗಿ ಮಾಡುವುದರ ಜೊತೆ ಜೊತೆಯಾಗಿಯೆ ಮಹಿಳಾ ಅಭಿವೃದ್ಧಿಯಲ್ಲಿ ಪುರುಷ ಸದಸ್ಯರ ಪಾಲ್ಗೊಳ್ಳುವಿಕೆಯನ್ನು ಸದೃಢಗೊಳಿಸಬೇಕಾದದ್ದೂ ಮುಖ್ಯ.

**ಸಲಹೆಗಳು:**

1. ಚುನಾಯಿತ ಮಹಿಳಾ ಸದಸ್ಯರಿಗೆ ರೂಪಿಸಲ್ಪಟ್ಟಿರುವ ತರಬೇತಿ ಕಾರ್ಯಕ್ರಮಗಳಲ್ಲಿ ಅವರ ಹಕ್ಕು ಮತ್ತು ಕರ್ತವ್ಯಗಳ ಬಗ್ಗೆ ಮತ್ತು ಮಹಿಳಾ ಅಬಿವೃದ್ಧಿ ಯೋಜನೆಗಳ ಬಗ್ಗೆ ಹೆಚ್ಚಿನ ಅವಧಿಯ ಚರ್ಚೆಗಳಾಗಬೇಕು. ಇಂತಹ ತರಬೇತಿಗಳನ್ನು ನಡೆಸುತ್ತಿರುವ ಸರ್ಕಾರದ ಇಲಾಖೆ ಹಾಗೂ ಸ್ವಯಂ ಸೇವಾ ಸಂಸ್ಥೆಗಳಿಗೆ ಈ ಬಗ್ಗೆ ಸೂಕ್ತ ನಿರ್ದೇಶನ ನೀಡಬೇಕು. ಇದರ ಜೊತೆಗೆ ನಿಯುತಕಾಲಿಕವಾಗಿ ಪುನಶ್ಚೇತನ ತರಬೇತಿ (Refresher Course) ಕಾರ್ಯಕ್ರಮಗಳು ಕಡ್ಡಾಯವಾಗಬೇಕು.
2. ಹೆಚ್ಚಿನ ಸಂಖ್ಯೆಯಲ್ಲಿ ಪ್ರಭಾವಶಾಲಿ ಮಹಿಳೆಯರು ರಾಜಕೀಯದಲ್ಲಿ ಪಾಲ್ಗೊಳ್ಳುವಂತೆ ಪ್ರೇರೇಪಿಸುವ ಸಲುವಾಗಿ ರಾಜ್ಯ ಚುನಾವಣಾ ಆಯುಕ್ತರ ನೇತೃತ್ವದಲ್ಲಿ ನಡೆಯುವ ಎಲ್ಲಾ ಚುನಾವಣಾ ಪ್ರಕ್ರಿಯೆಗಳು ಸರಳವಾಗಬೇಕು ಮತ್ತು ಚುನಾಯಿತ ಮಹಿಳೆಯರು, ರಾಜಕೀಯ ಪಕ್ಷಗಳ ಮಹಿಳಾ ಸದಸ್ಯರು, ಸ್ವಯಂ ಸೇವಾ ಸಂಸ್ಥೆಗಳು, ಮತ ನೀಡುವರಿಗಾಗಿ ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸಲು ರಾಜ್ಯ ಚುನಾವಣಾ ಆಯೋಗವು ನೆರವಾಗಬೇಕು.
3. ರಾಜಕೀಯದಲ್ಲಿ ಮಹಿಳೆಯರ ಭಾಗವಹಿಸುವಿಕೆ ಇನ್ನೂ ಹೊಸದಾಗಿರುವುದರಿಂದ, ಪುರುಷ ಪ್ರಧಾನ ಗ್ರಾಮೀಣ ವ್ಯವಸ್ಥೆ ಇನ್ನೂ ಪ್ರಭಲವಾಗಿರುವ ಕೆಲವು ಕಡೆಗಳಲ್ಲಿ ಚುನಾಯಿತ ಮಹಿಳೆಯರಿಗೆ ತೊಂದರೆಗಳಾಗಿರುವ ವರದಿಗಳಿರುವುದರಿಂದ, ಚುನಾಯಿತ ಮಹಿಳಾ ಸದಸ್ಯರಿಗೆ ಈ ರೀತಿಯ ಕಿರುಕುಳವಾಗದಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ವಹಿಸುವಂತೆ ಸರ್ಕಾರ ಜಿಲ್ಲಾಧಿಕಾರಿಗಳಿಗೆ ಹೆಚ್ಚಿನ ಅಧಿಕಾರ ನೀಡಬೇಕು.
4. ವಿಧಾನ ಸಭೆ ಮತ್ತು ಲೋಕ ಸಭೆಗಳಲ್ಲಿ ಶೇಕಡ 33 ರಷ್ಟು ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಾತಿ ಇಡುವುದಕ್ಕೆ ಸಂಬಂಧಪಟ್ಟ ಸಂವಿಧಾನದ 84 ನೆಯ ತಿದ್ದುಪಡಿ ಮಸೂದೆಗೆ ಬೆಂಬಲ ನೀಡಿ ಕರ್ನಾಟಕ ರಾಜ್ಯ ವಿಧಾನ ಸಭೆ ಮತ್ತು ವಿಧಾನ ಪರಿಷತ್‌ನಲ್ಲಿ ಸರ್ಕಾರ ಒಂದು ಮಂಡನೆಗೆ ಸರ್ವಾನುಮತದಿಂದ ಒಪ್ಪಿಗೆ ಪಡೆದು ಕೇಂದ್ರ ಸರ್ಕಾರಕ್ಕೆ ಕಳುಹಿಸಬೇಕು.
5. ರಾಜ್ಯದ ಒಟ್ಟಾರೆ ಅಭಿವೃದ್ಧಿಯಲ್ಲಿ ಮಹಿಳೆಯರನ್ನು ಸಕ್ರೀಯರನ್ನಾಗಿ ಮಾಡುವ ಸಲುವಾಗಿ ರಾಜ್ಯ ಲೋಕಸೇವಾ ಆಯೋಗ, ಯೋಜನಾ ಆಯೋಗಗಳನ್ನೂ ಒಳಗೊಂಡಂತೆ ಸರ್ಕಾರ ರಚಿಸುವ ಯಾವುದೇ ನಿಗಮ ಅಥವಾ ಮಂಡಲಿಗಳಲ್ಲಿ ಮಹಿಳೆಯರಿಗೆ ಕನಿಷ್ಠ ಅರ್ಧದಷ್ಟಾದರೂ ಸ್ಥಾನಗಳನ್ನು ಮೀಸಲಿಡಲು ಸಹಾಯವಾಗುವಂತೆ ಸರ್ಕಾರವು ತನ್ನ ನೀತಿಯಲ್ಲಿ ಸೂಕ್ತ ಬದಲಾವಣೆ ಮಾಡಿ ಒಂದು ಆದೇಶವನ್ನು ಹೊರಡಿಸಬೇಕು.

# ಮಹಿಳಾ ಟಾಸ್ಕ್ ಫೋರ್ಸ್

# ಗುಲ್ಬರ್ಗಾದಲ್ಲಿ ನಡೆದ ಪ್ರಥಮ ಕಾರ್ಯಾಗಾರದ ಸಂಕ್ಷಿಪ್ತ ವರದಿ

ಮಹಿಳೆಯರ ಸಮಸ್ಯೆಗಳ ಕುರಿತು ವಿಭಾಗ ಮಟ್ಟದಲ್ಲಿ ಕಾರ್ಯಾಗಾರ ನಡೆಸಿ ವಿವಿಧ ವರ್ಗದ ಮಹಿಳೆಯರ ಅಭಿಪ್ರಾಯ ಸಂಗ್ರಹಿಸುವ ಮೊದಲ ಪ್ರಯತ್ನವಾಗಿ ಗುಲ್ಬರ್ಗಾದಲ್ಲಿ ಕಾರ್ಯಾಗಾರವೊಂದನ್ನು ಆಯೋಜಿಸಲಾಗಿತ್ತು.

ಕಾರ್ಯಾಗಾರವನ್ನು ಕಲ್ಬುರ್ಗಿ ವಿಶ್ವವಿದ್ಯಾಲಯದ ಉಪ ಕುಲಪತಿ ಡಾ. ಎಂ.ವಿ. ನಾಡಕರ್ಣಿ ಉದ್ಘಾಟಿಸಿದರು. ಸಮಾರಂಭದಲ್ಲಿ ಮಹಿಳಾ ಟಾಸ್ಕ್‌ಫೋರ್ಸ್ ಸಮಿತಿ ಅಧ್ಯಕ್ಷೆ ಶ್ರೀಮತಿ ಗುರಮ್ಮಾ ಸಿದ್ದಾರೆಡ್ಡಿ, ಸಲಹೆಗಾರ್ತಿ ಶ್ರೀಮತಿ ಪದ್ಮಾಸೇಟ್, ಸದಸ್ಯೆ, ಶ್ರೀಮತಿ ವಾಸಂತಿ ಶಿವಣ್ಣ, ಶ್ರೀಮತಿ ಎಸ್.ಜಿ. ಸುಶೀಲಮ್ಮ ಮತ್ತಿತರರು ಭಾಗವಹಿಸಿದ್ದರು. ಈ ಕಾರ್ಯಾಗಾರದ ಸಂಕ್ಷಿಪ್ತ ವರದಿ ಇಲ್ಲಿದೆ.

## ಮಹಿಳಾ ಸಶಕ್ತೀಕರಣದಲ್ಲಿ ಶಿಕ್ಷಣದ ಮಹತ್ವ

**ಕಾರ್ಯಾಗಾರದಲ್ಲಿ ಭಾಗವಹಿಸಿದವರು:**

1. ಶ್ರೀಮತಿ ವಸುಮತಿ, ಮೇಲ್ವಿಚಾರಕಿ ಗುಲ್ಬರ್ಗಾ (ಗ್ರಾ.)
2. ಶ್ರೀಮತಿ ಶಶಿಕಲಾ ವಾಲಿ ಸಹಾಯಕ ನಿರ್ದೇಶಕರು, ಗುಲ್ಬರ್ಗಾ ಮ.ಮ.ಅ.ಇ.
3. ಶ್ರೀಮತಿ ವಸುಂದರ ಕುಲಕರ್ಣಿ, ಮೇಲ್ವಿಚಾರಕಿ ಜೇವರ್ಗಿ
4. ಶ್ರೀಮತಿ ಶಾಂತಾಬಾಯಿ ಮಹಿಳಾ ಅಧಿಕಾರಿಗಳು ಮ.ಮ.ಇ.ಎ. ಗುಲ್ಬರ್ಗಾ
5. ಶ್ರೀಮತಿ ಚೆನ್ನಮ್ಮ ಮೋಡಿ, ಮೇಲ್ವಿಚಾರಕಿ ಗುಲ್ಬರ್ಗಾ (ನಗರ)
6. ಶ್ರೀಮತಿ ಜಹಿದಾ ಖಾನ, ನಗರ ಮಹಿಳಾ ಮಂಡಳದ ಕಾರ್ಯದರ್ಶಿ
7. ಶ್ರೀಮತಿ ಆಶಾಲತಾ ಮೇಲ್ವಿಚಾರಕಿ, ಗುಲ್ಬರ್ಗಾ (ಗ್ರಾ.)
8. ಶ್ರೀಮತಿ ಲಲಿತಾ ಕಟ್ಟೀಮನಿ, ಸಹಾಯಕ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಶೋರಾಪೂರ
9. ಶ್ರೀಮತಿ ನಾಗರಾಜ, ಸಿಡಿಪಿಓ ಗುಲ್ಬರ್ಗಾ (ನಗರ)
10. ಶ್ರೀಮತಿ ಸರಸ್ವತಿ ಸಂಯೋಗ ಸಂಸ್ಥೆ ಬೀದರ
11. ಶ್ರೀಮತಿ ಗುಜ್ಜಮ್ಮ ರುದ್ರಾಂಬಿಕಾ ಮಹಿಳಾ ಮಂಡಳಿ ಬೀದರ್

ಈ ಚರ್ಚೆಯ ನಾಯಕತ್ವವನ್ನು ಶ್ರೀಮತಿ ಕವಿತಾ ಉಪರಾ ಮಹಿಳಾ ಕಾರ್ಯಕ್ರಮದ ನಿರ್ದೇಶಕಿ, ಸಂಯೋಗ ಸಂಸ್ಥೆ, ಬೀದರ ಇವರು ವಹಿಸಿದ್ದರು.

**ಸಲಹೆಗಳು:**

1. ಶಾಲಾ ಸುಧಾರಣಾ ಸಮಿತಿಗಳಲ್ಲಿ ಮಹಿಳಾ ನಾಯಕರು ಸ್ವಸಹಾಯ ಗುಂಪುಗಳ ಸದಸ್ಯರಿಗೆ ಆದ್ಯತೆ ನೀಡಿ, ಸಮಿತಿಗಳನ್ನು ರಚಿಸಬೇಕು.
2. ಶಾಲಾ ಕಾಲೇಜುಗಳಲ್ಲಿ ಉನ್ನತ ಶಿಕ್ಷಣಧವರೆಗೆ ಓದಿದವರಿಗೆ ಮಹಿಳೆಯರಿಗೆ ಪುಕ್ಕಟೆ, ಶಿಕ್ಷಣ ನೀಡುವ ವ್ಯವಸ್ಥೆ ಕಾನೂನು ಬದ್ಧ ಕ್ರಮ ಅಗತ್ಯ.
3. ಪ್ರಾಥಮಿಕ ಶಾಲಾ ಮಟ್ಟದಲ್ಲಿ ಹೆಚ್ಚಿನ ಆದ್ಯತೆ ನೀಡಿ ಮಹಿಳಾ ಶಿಕ್ಷಕರನ್ನು ನೇಮಿಸಬೇಕು.
4. ಮಹಿಳೆಯರಿಗೆ ಆತ್ಮ ಗೌರವ, ಸ್ವಾವಲಂಬನೆ, ಸ್ವರಕ್ಷಣೆ ಬೆಳೆಸಿಕೊಳ್ಳುವ ನಿಟ್ಟಿನಲ್ಲಿ ಉತ್ತಮ ಶಿಕ್ಷಣ ಮಾರ್ಗದರ್ಶನ ನೀಡಲು ಸರ್ಕಾರೇತರ ಸಂಘಸಂಸ್ಥೆಗಳು ಮುಂದೆ ಬರಬೇಕು.

5. ಸಮೂಹ ಮಾಧ್ಯಮಗಳು ಜವಾಬ್ದಾರಿಯುತವಾಗಿ ವರ್ತಿಸಿ ಮಹಿಳಾ ಅಭಿವೃದ್ಧಿ ಸಶಕ್ತತೆ ಕುರಿತು ಅವರನ್ನು ಬದ್ಧರನ್ನಾಗಿಸುವ ವಿಶೇಷ ಕಾರ್ಯಕ್ರಮಗಳನ್ನು ಪ್ರಸಾರ ಮಾಡಬೇಕು. ಮಹಿಳೆಯರ ಸಮಸ್ಯೆಗಳಿಗೆ ಸ್ಪಂದಿಸಿ ಸೂಕ್ತ ಪರಿಹಾರ ಕಂಡುಕೊಳ್ಳುವಂತೆ ಮಾರ್ಗದರ್ಶಕರಾಗಿ ಮಾಧ್ಯಮಗಳು ಕೆಲಸ ಮಾಡಬೇಕು.
6. ಶಾಲೆಯಿಂದ ವಂಚಿತರಾದ ಹಾಗೂ ಶಾಲೆಯಿಂದ ಹೊರಗುಳಿದ ಮಕ್ಕಳನ್ನು ಗುರುತಿಸಿ ಅವರಿಗೆ ವಿಶೇಷ ಅನೌಪಚಾರಿಕ ಶಿಕ್ಷಣ ತರಬೇತಿ ನೀಡಬೇಕು. ಇದಕ್ಕೆ ವಿಶೇಷ ಯೋಜನೆ ಮುಖಾಂತರ ಇಂತಹ ಮಕ್ಕಳಿಗೆ ಶಿಕ್ಷಣ ನೀಡಬಹುದಾಗಿದೆ.
7. ಆರ್ಥಿಕ ಸ್ವಾವಲಂಬನೆಗೆ ಪೂರಕವಾದ ವೃತ್ತಿಪರ ಕೌಶಲ್ಯದ ತರಬೇತಿ ನೀಡುವ ವ್ಯವಸ್ಥೆ ಆಗಬೇಕು. ಆರ್ಥಿಕ ಸಹಾಯದಿಂದಲೂ ಸಹ ಶಿಕ್ಷಣ ಪಡೆಯಲು ಸಾಧ್ಯ.
8. ಉತ್ತಮ ಶಿಕ್ಷಣಕ್ಕಾಗಿ ಬ್ಯಾಂಕಿನ ಸಾಲ ಸೌಲಭ್ಯ ಹೆಚ್ಚಿಸಬೇಕು. ಆದ್ಯತೆ ಮೇರೆಗೆ ಮಹಿಳೆಯರಿಗೆ ಸಾಲ ಸೌಲಭ್ಯ ನೀಡಬೇಕು.
9. ಗ್ರಾಮೀಣ ಬಡ ಮಕ್ಕಳಿಗೆ ಉತ್ತಮ ಗುಣಮಟ್ಟದ ಶಿಕ್ಷಣ, ಕಂಪ್ಯೂಟರ್ ಶಿಕ್ಷಣಕ್ಕೆ ಹೆಚ್ಚಿನ ಗಮನ ನೀಡಬೇಕು.
10. ಸರ್ಕಾರಿ ನೌಕರಿಯಲ್ಲಿ ಮಹಿಳಾ ವಿಧವೆಯರಿಗೆ ವಿವಾಹ ವಿಚ್ಛೇದಿತರಿಗೆ ವಯೋಮಿತಿ ಆಧಾರದ ಮೇಲೆ ಸೂಕ್ತ ನೌಕರಿಯಲ್ಲಿ ಮೀಸಲಾತಿ ನೀಡಬೇಕು.
11. ಸರ್ಕಾರ ಸ್ವಯಂ ಸೇವಾ ಸಂಸ್ಥೆಗಳು, ಮಹಿಳಾ ಅನೌಪಚಾರಿಕ ಶಿಕ್ಷಣದ ಮೂಲಕ ಮಹಿಳೆಯರಲ್ಲಿ ಜಾಗೃತಿ ಮೂಡಿಸಿ ತಮ್ಮ ಹಕ್ಕು ಬಾಧ್ಯತೆ, ಕರ್ತವ್ಯಗಳ ಬಗ್ಗೆ ಹೆಚ್ಚಿನ ಕಾರ್ಯಕ್ರಮಗಳನ್ನು ರೂಪಿಸಿ, ಶೈಕ್ಷಣಿಕ ಬೆಳವಣಿಗೆಗೆ ಆದ್ಯತೆ ನೀಡಬೇಕು.
12. ಮೌಲ್ಯ ಆಧಾರಿತ ಮಹಿಳಾ ಸಶಕ್ತೀಕರಣಕ್ಕೆ ಪೂರಕವಾದ ಪಠ್ಯಕ್ರಮ ರೂಪಿಸಿ ಪ್ರೌಢ ಶಾಲಾ ಕಾಲೇಜು ಮಟ್ಟದಲ್ಲಿ ಜಾರಿಯಲ್ಲಿ ತರಬೇಕು.
13. ಶಾಲೆ ಬಿಟ್ಟ ಮಕ್ಕಳಿಗೆ ಬಾಲ ಕಾರ್ಮಿಕರಿಗೆ ಸರ್ಕಾರದ ಯೋಜನೆ, ಬಾಲ ಕಾರ್ಮಿಕ ಶಾಲೆಯನ್ನು ಕಡಿಮೆ ಸಂಖ್ಯೆಯಲ್ಲಿ ನಡೆಸುತ್ತಿದ್ದು ಸದರಿ ಶಾಲೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ತೆರೆದು ತರಬೇತಿ ನೀಡಿ ರೆಗ್ಯೂಲರ್ ಶಾಲೆಗೆ ಮಕ್ಕಳನ್ನು ದಾಖಲಾತಿ ಮಾಡುವ ಮಕ್ಕಳ ಸಂಖ್ಯೆ ಜಾಸ್ತಿ ಮಾಡಿಸಬೇಕು.

## ಆರೋಗ್ಯದ ಸಮಸ್ಯೆಗಳು ಮತ್ತು ಪರಿಹಾರಗಳು

**ಕಾರ್ಯಾಗಾರದಲ್ಲಿ ಭಾಗವಹಿಸಿದವರು:**

1. ಡಾ.ಪಿ.ಎಲ್. ರಾಸಳಕರ
2. ಡಾ. ಪಿ.ಆರ್. ರಾಸಕರ ಎಂ.ಡಿ.ಸಿ. ಸ್ಪೆಷಲಿಸ್ಟ್, ಡಿಸ್ಟಿಕ್ ಹಾಸ್ಪಿಟಲ್, ಗುಲ್ಬರ್ಗಾ
3. ಶ್ರೀಮತಿ ಇಂದಿರಾ ವೀರಭದ್ರಪ್ಪ ಎಂ.ಆರ್. ಮೆಡಿಕಲ್ ಕಾಲೇಜ್, ಗುಲ್ಬರ್ಗಾ
4. ಶ್ರೀಮತಿ ಡಾ. ರಾಜಶ್ರೀ ವಿ.ಎಂ.ಎಸ್.ಎಂ.ಆರ್.ಎಂ.ಜಿ.
5. ಶ್ರೀ ಜಿ.ಟಿ. ಶಿರೋಳಕರ, ಸಿಡಿಪಿಓ ಚಿಂಚೋಳಿ
6. ಶ್ರೀ ಎಸ್.ಎಸ್. ಕಣ್ಣೂರಕರ, ಅಸಿಸ್ಟಂಟ್ ಸಿಡಿಪಿಓ ಜೇವರ್ಗಿ
7. ಸೀತಾ ಆರ್.ಕೆ.
8. ಶಕುಂತಲಾ ಡಿ.
9. ನಿರ್ಮಲಾ ಆರ್.
10. ಕಮಲಾ ಜೆ.

11. ಎಂ.ಎಸ್. ಶೋಭಾ ಡಿ. ಕರಣಿಜರ ಗುಲ್ಬರ್ಗಾ ಮಹಿಳಾ ಸಮುಖ್ಯ

12. ನಾಗರತ್ನ ಸಿ.

ಈ ಚರ್ಚೆಯ ನಾಯಕತ್ವವನ್ನು ಡಾ. ಎಸ್.ಎಸ್. ಸಿದ್ದಾರೆಡ್ಡಿ ಪ್ರೆಸಿಡೆಂಟ್ ಎಫ್.ಪಿ.ಎ.ಐ. ಗುಲ್ಬರ್ಗಾ ಇವರು ವಹಿಸಿದ್ದರು.

**ಆರೋಗ್ಯಕ್ಕೆ ಸಂಬಂಧಪಟ್ಟ ಸಮಸ್ಯೆಗಳು:**

1. ತುರ್ತು ಪರಿಸ್ಥಿತಿ ಬಂದಾಗ ರೋಗಿಯನ್ನು ಆಸ್ಪತ್ರೆಗೆ ಸಾಗಿಸಲು ಅಥವಾ ಆರೋಗ್ಯ ಸಿಬ್ಬಂದಿ ಕರೆದು ತರಲು ವಾಹನ ಸೌಕರ್ಯ ಇರುವುದಿಲ್ಲ.

   ಉದಾ: ಅತಿ ಭೇದಿಯ ರೋಗ ಹಾಗೂ ವಾಂತಿ ಆಗಿ ಹಳ್ಳಿಯಲ್ಲಿ ನೂರಾರು ಜನರು ತೊಂದರೆ ಪಟ್ಟರು.

2. ಇದೇ ರೀತಿಯಾಗಿ ಗರ್ಭಿಣಿ ಮಹಿಳೆಗೆ ತೊಂದರೆ ಆದಾಗ ವಾಹನ ಸೌಕರ್ಯ ದೊರೆಯುವುದಿಲ್ಲ.

**ಪರಿಹಾರ:**

ತುರ್ತು ಪರಿಸ್ಥಿತಿ ಬಂದಾಗ ರೋಗಿಯನ್ನು ಸಾಗಿಸಲು ಅಥವಾ ವೈದ್ಯರನ್ನು ಕರೆ ತರಲು ವಾಹನ ಸೌಕರ್ಯ ಒದಗಿಸಬೇಕು. ಅಂದರೆ ಸಹಕಾರ ಸಂಘಗಳನ್ನು ಸ್ಥಾಪಿಸಿ ವಾಹನದ ಸೇವೆ ಜನ ಸಾಮಾನ್ಯರಿಗೆ ದೊರೆಯುವಂತೆ ಮಾಡಬೇಕು.

**ಶುದ್ಧವಾದ ಸುರಕ್ಷಿತವಾದ ಕುಡಿಯುವ ನೀರಿನ ಪೂರೈಕೆ:**

ಕಲುಷಿತ ನೀರಿನಿಂದ ಬಹಳಷ್ಟು ರೋಗಗಳು ಹರಡುತ್ತವೆ. ಉದಾ: ವಾಂತಿ, ಭೇದಿರೋಗ, ಕಾಲರಾ, ಕಾಮಾಲೆ, ಟೈಫಾಯಿಡ್.

**ಪರಿಹಾರ:**

ಆದುದರಿಂದ ಹಳ್ಳಿಗಳಲ್ಲಿ ವಾಸಿಸುವ ಬಡ ಜನರಿಗೆ ಸ್ವಚ್ಛ ಕುಡಿಯುವ ನೀರು ದೊರೆಯುವಂತೆ ವ್ಯವಸ್ಥೆ ಮಾಡಬೇಕು. ಉದಾ: ಬೋರ್‌ವೆಲ್

**3. ವಾಂತಿ ಭೇದಿ ಆದ ರೋಗಿಗೆ:**

ನಿಂಬೆಹಣ್ಣು + ಸಕ್ಕರೆ + ಉಪ್ಪಿನ ಪಾನಕ ಕೊಡಲು ಹೋದರೆ ಕೆಲವರು ಪ್ರತಿಭಟಿಸುತ್ತಾರೆ ಆದುದರಿಂದ ಜನ ಸಮುದಾಯಕ್ಕೆ ಆರೋಗ್ಯ ಶಿಕ್ಷಣ ನೀಡುವ ವ್ಯವಸ್ಥೆ ಆಗಬೇಕು.

**4. ಗ್ರಾಮೀಣ ಪ್ರದೇಶದಲ್ಲಿ ಸುರಕ್ಷಿತ ಹೆರಿಗೆ ಸೌಲಭ್ಯ ಇರುವುದಿಲ್ಲ!**

**ಸಮಸ್ಯೆಗಳು:**

ತರಬೇತಿ ಹೊಂದಿದ ದಾದಿ ಸಿಗುವುದಿಲ್ಲ, (ಟಿಬಿಎ)ವಾಹನ ಸೌಕರ್ಯವಿಲ್ಲ, ಸರಿಯಾಗಿ ಸಂದರ್ಶಿಸುವುದಿಲ್ಲ, ಹೆಣ್ಣು ಮಕ್ಕಳ ಕಾಯಿಲೆ ಅರ್ಥ ಮಾಡಿಕೊಳ್ಳುವುದಿಲ್ಲ

**ಪರಿಹಾರ:**

ಸಾಕಷ್ಟು (ಜಬಿಎ) ತರಬೇತಿ ಹೊಂದಿದ ದಾದಿಯನ್ನು ಸರ್ಕಾರ ಒದಗಿಸಬೇಕು ಹೆಚ್ಚು ಹೆಚ್ಚು ಜನರಿಗೆ ಸುರಕ್ಷಿತ ಹೆರಿಗೆಯ ಬಗ್ಗೆ ಶಿಕ್ಷಣ ನೀಡಬೇಕು. ಮಾತೃ ಸಂರಕ್ಷತೆ, ಶಿಶು ಸಂರಕ್ಷತೆ (ಸಿಎಸ್‌ಎಸ್‌ಎಂ) ಸರಿಯಾಗಿ ಅನುಷ್ಠಾನಗೊಳಿಸಬೇಕು. ವಾಹನ ಸೌಕರ್ಯದ ಬಗ್ಗೆ ಮತ್ತೊಮ್ಮೆ ಒತ್ತುಕೊಟ್ಟು ಹೇಳಬೇಕು.

## 5. ಗ್ರಾಮೀಣ ಮಹಿಳೆಯರು ಅಪೌಷ್ಟಿಕ ಸಮಸ್ಯೆ:

ಮಹಿಳೆಯರು ಅಪೌಷ್ಟಿಕ ಆಹಾರ ಸೇವಿಸುವುದರಿಂದ ಬಹಳಷ್ಟು ರೋಗಗಳಿಗೆ, ಅಶಕ್ತತೆಗೆ, ರಕ್ತ ಹೀನತೆಗೆ ಬಲಿಯಾಗುತ್ತಾ ಇದ್ದಾರೆ. ಗ್ರಾಮೀಣ ಪರಿಸರದಲ್ಲಿ ಕಡಿಮೆ ಬೆಲೆಗೆ ಸುಲಭವಾಗಿ ಪೌಷ್ಟಿಕ ಆಹಾರ ದೊರೆಯುತ್ತಿದ್ದರೂ ಮೂಢ ನಂಬಿಕೆಯಿಂದ ಇಂತಹ ಆಹಾರವನ್ನು ಈ ಜನರು ಸೇವಿಸುತ್ತಾ ಇಲ್ಲ.

**ಉದಾ:** ಗಡಿಕೇಶ್ವರ ಎಂಬ ಗ್ರಾಮದಲ್ಲಿ ಒಂದು ಬಹಳ ದೊಡ್ಡದಾದ ಚೆನ್ನಾಗಿ ಇರುವ ನುಗ್ಗೆ ಗಿಡ ಇದೆ. ಆದರೆ ಆ ಊರಿನ ಜನ ಈ ಗಿಡದ ನುಗ್ಗೆಕಾಯಿ ಸೇವಿಸುವುದಿಲ್ಲ. ಏಕೆಂದರೆ ಬಹಳದಿನಗಳ ಹಿಂದೆ ಒಬ್ಬ ಮನುಷ್ಯ ಈ ಗಿಡದ ಕೆಳಗೆ ಮರಣ ಹೊಂದಿದ್ದನು.

**ಪರಿಹಾರ:**

ಗ್ರಾಮೀಣ ಮಹಿಳೆಯರಿಗೆ ಪೌಷ್ಠಿಕ ಆಹಾರದ ಮಹತ್ವದ ಬಗ್ಗೆ ತಿಳಿಸಿ ಹೇಳಬೇಕು. ಪೌಷ್ಠಿಕ ಆಹಾರ ಸೇವಿಸಲು ಬುದ್ಧಿವಂತಿಕೆ ಬೇಕು. ಸಿರಿವಂತಿಕೆ ಅಲ್ಲ ಎಂಬುದನ್ನು ತಿಳಿಸಿ ಹೇಳಬೇಕು.

**ಉದಾ:** ದ್ವಿದಳ ಧಾನ್ಯಗಳು, ಬಿ. ಜೀವಸತ್ವ, ಸಾರಜನಕ, ಮಡಕಿ, ಹೆಸರು, ಕಡೆಲೆ ಇತ್ಯಾದಿ ಉಪಯೋಗಿಸುವುದು. ಮೊಳಕೆ ಒಡೆದ ಕಾಳುಗಳ ಸೇವನೆ, ನುಗ್ಗೆಕಾಯಿ, ನುಗ್ಗೆ ಸೊಪ್ಪು ವಿಟಮಿನ್ - ಎ ಪುಂಡಿಪಲ್ಯ, ತಯಾರಿಸುವ ವಿಧಾನ, ಬೇಳೆ ಶೇಂಗಾ ಎಣ್ಣೆ ಮಸಾಲೆ ಉಪಯೋಗಿಸುವುದರಿಂದ ಸಾಕಷ್ಟು ಪ್ರೋಟೀನ್ (ಸಾರಜನಕ) ಕಬ್ಬಿಣಾಂಶ ಆಮ್ಲ ದೊರೆಯುತ್ತದೆ ಪಪಾಯಿ ಹಣ್ಣು ವಿಟಾಮಿನ್ ಎ, ಮಾವಿನ ಮಾವಿನ ಹಣ್ಣು ವಿಟಾಮಿನ್ ಎ, ಸೀತಾಪೇರಲ್ ಹಣ್ಣು ವಿಟಾಮಿನ್ ಎ ಕ್ಯಾಲ್ಸಿಯಂ ದೊರೆಯುತ್ತದೆ.

ಆದುದರಿಂದ ಸ್ಥಳೀಯವಾಗಿ ದೊರೆಯುವ ಬೆಲೆ ಕಡಿಮೆ ಇರುವ ಆದರೆ ಪೌಷ್ಠಿಕ ಅಂಶಗಳಿಂದ ಕೂಡಿದ ಆಹಾರ ಪದಾರ್ಥಗಳನ್ನು ಉಪಯೋಗಿಸಲು ಗ್ರಾಮೀಣ ಮಹಿಳೆಯರಿಗೆ ತಿಳಿಸಿ ಹೇಳಬೇಕು.

**ಗ್ರಾಮಗಳಲ್ಲಿ ಸ್ವಸಹಾಯ ಗುಂಪು:**

ಈ ಗುಂಪು ಮಾಡಿ ಆರೋಗ್ಯದ ಏನಾದರೂ ಸಮಸ್ಯೆ ಇದ್ದರೆ ಅದನ್ನು ಪರಿಹರಿಸಲು ಪ್ರಯತ್ನಿಸಬೇಕು.

## 6. ವೈಯಕ್ತಿಕ ಸ್ವಚ್ಛತೆ ಸಮಸ್ಯೆ:

ಸಾಕಷ್ಟು ಮಹಿಳೆಯರಿಗೆ ವೈಯಕ್ತಿಕ ಸ್ವಚ್ಛತೆಯ ಬಗ್ಗೆ ಇನ್ನೂ ಜ್ಞಾನವಿಲ್ಲ. ಜನನ ಮಾರ್ಗದ ಸೋಂಕು ಹಾಗೂ ಅದರಿಂದ ಆಗುವ ಭೀಕರ ಪರಿಣಾಮಗಳ ಬಗ್ಗೆ ಕಲ್ಪನೆಯೇ ಇಲ್ಲ.

**ಪರಿಹಾರ:**

**ವೈಯಕ್ತಿಕ ಸ್ವಚ್ಛತೆ:**

ಪ್ರತಿ ದಿನ ಸ್ನಾನ ಮಾಡುವುದು, ಸ್ವಚ್ಛವಾದ ಬಟ್ಟೆ ಧರಿಸುವುದು. ಹಸ್ತಗಳು, ಹಲ್ಲುಗಳು, ಕೂದಲುಗಳು ತ್ವಚೆಯ ಆರೋಗ್ಯ ರಕ್ಷಣೆ, ಉಗುರುಗಳ ಸ್ವಚ್ಛತೆ ಇದರ ಬಗ್ಗೆ ತಿಳುವಳಿಕೆ ನೀಡಬೇಕು.

ಬೋರ್‌ವೆಲ್ ನೀರು ಉಪಯೋಗಿಸುವುದರಿಂದ ಕಿಡ್ನಿಸ್ಟೋನ್ ಆಗುತ್ತದೆ ಎಂಬ ಭಾವನೆ ಇರುವುದರಿಂದ ಎಷ್ಟೋ ಗ್ರಾಮಗಳಲ್ಲಿ ಬೋರ್‌ವೆಲ್ ನೀರು ದೊರೆಯುತ್ತಿದ್ದರು ಉಪಯೋಗಿಸುವುದಿಲ್ಲ.

**ಪರಿಹಾರ:**

ನೀರು ಬಹಳ ಕಠಿಣ ಇದ್ದರೆ ಮಾತ್ರ ಈ ಸಮಸ್ಯೆ ಬರಬಹುದು, **ಎಲ್ಲಿಯೇ ಒಂದು ಕೊಳವೆ ಬಾವಿ ಹಾಗಿರಬಹುದು.** ಕೊಳವೆ ಬಾವಿ ನೀರು ಉಪಯೋಗ ಬಿಡಬಾರದು. ಇಲ್ಲದಿದ್ದರೆ ಕಲುಷಿತ ನೀರಿದ್ದರೆ ಕಲುಷಿತ ನೀರಿನಿಂದ ಈ ಕೆಳಗಿನ ರೋಗಗಳು ಬರಬಹುದು ಎಂದು ತಿಳಿಸಿ ಹೇಳಬೇಕು.

ಉದಾ: ವಾಂತಿ ಭೇದಿ ರೋಗ, ಕಾಲರಾ, ಟೈಫಾಯಿಡ್, ಕಾಮಾಲೆ ರೋಗ, ಇತ್ಯಾದಿ.

## 7. ತಂಬಾಕು ಸೇವನೆ ಸಮಸ್ಯೆ:

ಹಳ್ಳಿಗಾಡಿನಲ್ಲಿ ಎಷ್ಟೋ ಮಹಿಳೆಯರು ತಂಬಾಕು ಸೇವಿಸುತ್ತಾರೆ. ಕೆಲವರು ಧೂಮಾಪಾನ ಮಾಡುತ್ತಾರೆ.

**ಪರಿಹಾರ:**

ತಂಬಾಕು ಸೇವನೆಯಿಂದ ಆಗುವ ಹಾನಿಯ ಬಗ್ಗೆ ತಿಳಿಸಿ ಹೇಳಬೇಕು. ಅಂದರೆ ಜಠರದ ಹುಣ್ಣು, ಪುಪ್ಪಸದ ಕ್ಯಾನ್ಸರ್, ಹೃದಯಾಘಾತ, ಬ್ರಾಂಕಿಯ್ಸಿಸ್ ಕುರುಡುತನ, ನರಗಳ ದೌರ್ಬಲ್ಯ ಇತ್ಯಾದಿ.

## 8. ಮಗುವಿಗೆ ಎದೆಹಾಲು ನೀಡುವ ಬಗ್ಗೆ ಸಮಸ್ಯೆ:

ಗ್ರಾಮೀಣ ಪ್ರದೇಶದಲ್ಲಿ ಬಹಳಷ್ಟು ಮಹಿಳೆಯರು ತಮ್ಮ ಎದೆ ಹಾಲನ್ನು ತಮ್ಮ ಮಗುವಿಗೆ ನೀಡುತ್ತಾ ಇದ್ದಾರೆ, ಆದರೆ ಇತ್ತೀಚಿಗೆ ಕೆಲ ಮಹಿಳೆಯರು ತಮ್ಮ ಎದೆ ಹಾಲು ಕುಡಿಸಲು ಹಿಂಜರಿಯುತ್ತಾರೆ.

**ಪರಿಹಾರ:**

ಮಹಿಳೆಯರಿಗೆ ತಾಯಿಯ ಹಾಲಿನ ಮಹತ್ವದ ಬಗ್ಗೆ ತಿಳಿಸಿ ಹೇಳಬೇಕು.

**ಉದಾ:**

1. ಹುಟ್ಟಿದ ಕೂಡಲೇ ಮಗುವಿಗೆ ಎದೆ ಹಾಲು ನೀಡಬೇಕು.
2. ಮಗುವಿಗೆ 6 ತಿಂಗಳು ತುಂಬುವವರೆಗೆ ತಾಯಿಯ ಹಾಲನ್ನು ಬಿಟ್ಟು ಬೇರೆ ಏನೂ ನೀಡಬಾರದು. ಅಂದರೆ ನೀರು, ಜೇನುತುಪ್ಪ ಇತ್ಯಾದಿ ಕೊಡಬಾರದು.
3. ಹೆರಿಗೆ ಆದ ಮೊದಲು ಮೂರು ದಿನ ಬರುವ ಹಾಲಿನಲ್ಲಿ (ಗಿಣ್ಣು) ಬಹಳಷ್ಟು ಶಕ್ತಿ ಇರುತ್ತದೆ. ರೋಗ ನಿರೋಧಕ ಶಕ್ತಿ ಇರುತ್ತದೆ.
4. 6 ತಿಂಗಳು ತುಂಬಿದ ನಂತರ ಮಗುವಿಗೆ ತಾಯಿಯ ಹಾಲಿನ ಜೊತೆಗೆ ಮೃದುವಾದ ಆಹಾರ ನೀಡಬೇಕು. ಕುದಿಸಿದ ಬೇಳೆ, ಬಟಾಟೆ ಕುದಿಸಿ ಹಿಚುಕಿದ ಪಲ್ಯೆ, ಬಾಳೆ ಹಣ್ಣು ಇತ್ಯಾದಿ.
5. ತಾಯಿಯ ಹಾಲು ಸೇವಿಸಿದ ಮಗುವಿನ ಐ.ಕ್ಯೂ. ಹೆಚ್ಚಿಗೆ ಇರುತ್ತದೆ. ಮಗು ಮಾತನಾಡಲು ಬೇಗನೆ ಕಲಿಯುತ್ತದೆ.
6. ಮಗುವಿನ ಮುಖದ ಬೆಳವಣಿಗೆ ಚೆನ್ನಾಗಿ ಆಗುತ್ತದೆ. ಮಗುವಿನ ಕಿವಿ ಸೋರುವುದಿಲ್ಲ. ಇತ್ಯಾದಿ.
7. ಮಗುವಿಗೆ ತನ್ನ ಎದೆ ಹಾಲು ನೀಡಿದ ಮಹಿಳೆಗೆ ಸ್ತನದ ಕ್ಯಾನ್ಸರ್ ಆಗುವ ಸಂಭವ ಬಹಳ ಕಡಿಮೆ.

**ರಕ್ತ ಹೀನತೆ ಸಮಸ್ಯೆ**

ಗ್ರಾಮೀಣ ಮಹಿಳೆಯರಲ್ಲಿ ಅದೂ ಗರ್ಭಿಣಿ ಆದಾಗ ರಕ್ತ ಹೀನತೆ ಹೆಚ್ಚಾಗಿ ಕಂಡು ಬರುತ್ತದೆ. ಇದಕ್ಕೆ ಕಾರಣ ಏನು? ಪರಿಹಾರವೇನು?

**ಪರಿಹಾರ:**

ಗ್ರಾಮೀಣ ಪ್ರದೇಶದಲ್ಲಿ ದೊರೆಯುವ ಪೌಷ್ಠಿಕ ಆಹಾರ ಸೇವಿಸಬೇಕು. ಚಿಕ್ಕ ಕುಟುಂಬದ ಬಗ್ಗೆ ಹೆಚ್ಚು ತಿಳುವಳಿಕೆ ನೀಡಬೇಕು, ನೈರ್ಮಲ್ಯ ಕಾಪಾಡಿ ಜಂತು ರೋಗಗಳಿಂದ ಮುಕ್ತಿ ದೊರಕಿಸಬೇಕು. ಅಂತರದ ಹೆರಿಗೆ ಪಾಲಿಸಬೇಕು. ಗ್ರಾಮೀಣ ಪ್ರದೇಶದಲ್ಲಿ ರಕ್ತ ಹೀನತೆ ಕಡಿಮೆಯಾಗಲು ವ್ಯವಸ್ಥೆ ಆಗಬೇಕು.

# ಮಹಿಳೆಯರ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ:

**ಕಾರ್ಯಾಗಾರದಲ್ಲಿ ಭಾಗವಹಿಸಿದವರು:**

1. ಶ್ರೀಮತಿ ಭಾರತಿ ವಿ.ಜಿ. ವುಮೆನ್ಸ್ ಕಾಲೇಜು.
2. ಶ್ರೀಮತಿ ವಿಜಯಲಕ್ಷ್ಮೀ ಕೆ.ವಿ.ಜಿ. ಮಹಿಳಾ ಕಾಲೇಜು.
3. ಶ್ರೀಮತಿ ಸೌದಾಮಿನಿ ರಾವ್ ವಿ.ಜಿ. ಮಹಿಳಾ ಕಾಲೇಜು.
4. ಶ್ರೀಮತಿ ಪಾಪಮ್ಮ ಹಾಬಾಕರ ಸೂಪರವೈಸರ್, ಸಿ.ಡಿ.ಪಿ.ಓ.
5. ಶ್ರೀಮತಿ ಸರಳಾ ದೊಡ್ಡಮನಿ ಮೇಲ್ವಿಚಾರಕಿ ಸಿಡಿಪಿಓ

6. ಶ್ರೀಮತಿ ಭಾರ್ಗವಿ ಜಿಎನ್‌ವ್ಹಿ ಕಾಲೇಜ್, ವಿದ್ಯಾರ್ಥಿನಿ, ಪಿಯುಸಿ-1
7. ಶ್ರೀಮತಿ ಅಶ್ವಿನಿ ಆಶ್ರಿತ ಎನ್.ವ್ಹಿ. ಕಾಲೇಜ್
8. ಶ್ರೀಮತಿ ರಶ್ಮಿ ಜಿ.ಸಿ. ಡಿಪ್ಲೋಮಾ ಮಹಿಳಾ ಕಾಲೇಜ್ -2
9. ಶ್ರೀಮತಿ ಅಕ್ಕಮಹಾದೇವಿ ಚಂದ್ರಶೇಖರ, ಗುಲ್ಬರ್ಗ
10. ಶ್ರೀಮತಿ ಶೋಭಾನಾ ಜೋಸಿ ಮೇಲ್ವಿಚಾರಕಿ ಸಿಡಿಪಿಓ (ಗ್ರಾ)
11. ಶ್ರೀಮತಿ ತಿಪ್ಪಮ್ಮ ಬಡಿಗೇರ, ಗ್ರಾಮ ಸೇವಕಿ ಪ್ರಗತಿ ಸೇವಾ ಸಮಿತಿ
12. ಶ್ರೀಮತಿ ಪ್ರಭಾವತಿ ಸಹಾಯಕ ನಿರ್ದೇಶಕರು, ಮ.ಮ.ಇ. ಬೀದರ

ಈ ಚರ್ಚೆಯ ನಾಯಕತ್ವವನ್ನು ಶ್ರೀಮತಿ ಸತ್ಯವ್ವ ನಾರಾಯಣಕರ, ಮೇಲ್ವಿಚಾರಕಿ ಯಾದಗಿರಿಯವರು ವಹಿಸಿದ್ದರು.

**ಸಲಹೆಗಳು:**

1. 1991ರ ಜನಗಣತಿಯಂತೆ 1000ಕ್ಕೆ 996 ಹೆಣ್ಣು ಮಕ್ಕಳ ಜನನ ಪ್ರಮಾಣ ಇರುವುದು. ಅಲ್ಲದೆ ಇನ್ನೂ ಕಡಿಮೆ ಆಗುತ್ತ ಹೋಗುತ್ತಲಿದೆ. ಇದಕ್ಕೆ ಮುಖ್ಯವಾದ ಕಾರಣ ಹೆಣ್ಣು ಮಗುವಿನ ಭ್ರೂಣಹತ್ಯೆ. ಭ್ರೂಣ ಹತ್ಯೆಯನ್ನು ತಡೆಗಟ್ಟುವಲ್ಲಿ ಮಹಿಳೆ ಧೈರ್ಯದ ವಿಚಾರವನ್ನು ತೋರಿಸಬೇಕು. ಕುಟುಂಬದವರ ವಿಚಾರವನ್ನು ವಿರೋಧಿಸುವಂತಹ ಆತ್ಮ ಬಲವನ್ನು ಹೊಂದಿರಬೇಕು. ಈ ಭ್ರೂಣ ಹತ್ಯೆಯ ವಿಚಾರದಲ್ಲಿ ಮಹಿಳೆಯ ಕುಟುಂಬದವರಿಗೆ ಪ್ರೋತ್ಸಾಹವನ್ನು ಕೊಡಬಾರದು.
2. ನಮ್ಮ ಪಠ್ಯಕ್ರಮ, ಶಿಕ್ಷಕರ ಮನೋಭಾವ, ಸಮೂಹ ಮಾಧ್ಯಮ, ಜಾಹಿರಾತುಗಳು ಈ ಎಲ್ಲಾ ವಲಯಗಳಲ್ಲಿ ಹೆಣ್ಣು ಮಕ್ಕಳ ಸ್ವಂತಿಕೆಯ ಬೆಳವಣಿಗೆಗೆ ಪೂರಕವಾದ ಅಂಶಗಳು ಇರಬೇಕು.
3. ಹೆಣ್ಣು ಮಕ್ಕಳ ಮೇಲೆ ನಡೆಯುವ ಶೋಷಣೆ, ಅತ್ಯಾಚಾರವನ್ನು ತಡೆಗಟ್ಟಲು ಪ್ರತಿಯೊಂದು ತಾಲ್ಲೂಕು ಮಟ್ಟದಲ್ಲಿ ಪೊಲೀಸ್ ಠಾಣೆಗಳಲ್ಲಿ ಮಹಿಳಾ ಪೊಲೀಸ್‌ರಿಗೆ ಹೆಚ್ಚಿನ ಅಧಿಕಾರವನ್ನು ನೀಡಬೇಕು.
4. ವರದಕ್ಷಿಣೆ ಸಮಸ್ಯೆಯ ಪರಿಹಾರಕ್ಕೆ ಅಂತರಜಾತೀಯ ವಿವಾಹವನ್ನು ಪ್ರೋತ್ಸಾಹಿಸಬೇಕು. ವರದಕ್ಷಿಣೆಯ ಪ್ರಕರಣಗಳಿಗೆ ಸಂಬಂಧಿಸಿದಂತೆ ಇನ್ನೂ ಕಠಿಣ ಕಾನೂನು ಕ್ರಮ ತೆಗೆದುಕೊಳ್ಳವಂತೆ ಸರ್ಕಾರಕ್ಕೆ ಮನವಿ ಮಾಡಿಕೊಳ್ಳಬೇಕು. ಕಾನೂನಿನಲ್ಲಿ ಬದಲಾವಣೆ ಆಗಬೇಕು. ಸಮಸ್ಯೆಯ ಪರಿಹಾರಕ್ಕೆ ಅತ್ತೆಂದಿರ ಸಮ್ಮೇಳನಗಳನ್ನು ಏರ್ಪಡಿಸಿ ಜಾಗೃತಿಯನ್ನುಂಟು ಮಾಡುವ ಯೋಜನೆಗಳನ್ನು ರೂಪಿಸಬೇಕು.
5. ಸರ್ಕಾರಿ ಮತ್ತು ಖಾಸಗಿ ಇಲಾಖೆಗಳಲ್ಲಿ ದುಡಿಯುವ ಮಹಿಳೆಯ ಮೇಲೆ ನಡೆಯುವ ಲೈಂಗಿಕ ಅತ್ಯಾಚಾರಗಳನ್ನು ತಡೆಗಟ್ಟಲು ಹಾಗೂ ಇತರರ ಸಮಸ್ಯೆಯನ್ನು ಬಗೆಹರಿಸಲು ಪ್ರತಿ ಜಿಲ್ಲೆ ಮತ್ತು ತಾಲ್ಲೂಕು ಮಟ್ಟದಲ್ಲಿ ಮಹಿಳಾ ಘಟಕಗಳು ತೆರೆಯಬೇಕು. ಈ ಘಟಕಗಳು ಸರ್ಕಾರದಿಂದ ಮನ್ನಣೆ ಪಡೆದಿರಬೇಕೆಂದು ಕೋರಲಾಯಿತು. ಪ್ರತಿ ಆಫೀಸಿನಲ್ಲಿ ಸಹಿತ ಇಂಥ ಸಮಿತಿ ಇರಬೇಕು.
6. ಮಹಿಳಾ ಅಭಿವೃದ್ದಿಗೆ ಸಂಬಂಧಿಸಿದಂತೆ ಸರ್ಕಾರ ನೀಡುತ್ತಿರುವ ನಿಧಿಯು ಸಕಾಲಕ್ಕೆ ತಲುಪದೇ ಇರುವುದರಿಂದ ಮಹಿಳಾ ಅಭಿವೃದ್ದಿ ಯೋಜನೆಗಳು ಅಸಫಲತೆಯತ್ತ ಸಾಗಿವೆ. ಇದಕ್ಕೆ ಸಂಬಂಧಪಟ್ಟವರ ವಿರುದ್ದ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಸರ್ಕಾರಕ್ಕೆ ಮನವಿ ಮಾಡಿಕೊಳ್ಳಬೇಕು.
7. ಮಹಿಳೆಯರಲ್ಲಿ ಶೈಕ್ಷಣಿಕ, ಕಾನೂನು, ಆರ್ಥಿಕ, ಮೂಡನಂಬಿಕೆ ಬಗ್ಗೆ ಜಾಗೃತಿಯನ್ನುಂಟು ಮಾಡಲು ಹೆಚ್ಚಿನ ಶಿಬಿರಗಳನ್ನು ಏರ್ಪಡಿಸಲು ಸರ್ಕಾರಕ್ಕೆ ಮನವಿ ಮಾಡಿಕೊಳ್ಳಬೇಕು.
8. ಕುಟುಂಬ ನ್ಯಾಯಾಲಯದಲ್ಲಿ ಮಹಿಳಾ ನ್ಯಾಯಾಧೀಶರನ್ನು ಹೆಚ್ಚಾಗಿ ನೇಮಕ ಮಾಡಿಕೊಳ್ಳಬೇಕು. ಕೌಟುಂಬಿಕ ನ್ಯಾಯಾಲಯಗಳಲ್ಲಿ ಮನೋವೈಜ್ಞಾನಿಕ ಸಲಹೆಗಳನ್ನು ಪಡೆದುಕೊಂಡು ತೀರ್ಮಾನ ಕೊಡಬೇಕು.

# ಮಹಿಳಾ ಆರ್ಥಿಕ ಸ್ವಾವಲಂಬನೆ ಗುಂಪು ವರದಿ

ಮಹಿಳೆ ವೈಯಕ್ತಿಕವಾಗಿ ಮುಂದೆ ಬಂದರೆ ಸಾಲದು. ಕೆಲವು ಯೋಜನೆಗಳ ಮೂಲಕ ಅವುಗಳನ್ನು ಸರಿಯಾದ ರೀತಿಯಲ್ಲಿ ಯಶಸ್ವಿಯಾಗಿ ಮಾಡಬಹುದು. ಉದಾ: ಎಸ್.ಎಂ.ಜ.ಆರ್.ಡಿ.ಪಿ. ಮಾನವನಿಗೆ ಮೂಲಭೂತವಾಗಿ ಬೇಕಾಗಿರುವುದು. ಆಹಾರ, ವಸತಿ, ಬಟ್ಟೆ ಇತ್ಯಾದಿ, ಮಹಿಳೆ ಮತ್ತು ಪುರುಷರಲ್ಲಿ ಸಮಾನತೆಯಿರಬೇಕು. ಮಹಿಳೆಯರು ದುಡಿಯುತ್ತಿದ್ದರೂ ಅವರು ಗಳಿಸಿದಂತಹ ಹಣದ ಮೇಲೆ ಅಧಿಕಾರವಿಲ್ಲ.

1. ಮಹಿಳಾ ಆದಾಯ ಎಷ್ಟು? ಸಂಪನ್ಮೂಲಗಳು, ಕೂಲಿ ಮಹಿಳೆಯರಿಗೆ ಪಂಚಾಯಿತಿಗಳಲ್ಲಿರುವ ಅವಕಾಶಗಳು ಎಷ್ಟು? ಎಂಬುದರ ಬಗೆಗೆ ಪರಾಮರ್ಶೆ ನಡೆಯಬೇಕು.
2. ಹೈದ್ರಾಬಾದ್ ಕರ್ನಾಟಕದಲ್ಲಿ ಬೀದರ, ಬಳ್ಳಾರಿ ಗುಲ್ಬರ್ಗಾ, ರಾಯಚೂರು, ಈ ಭಾಗದಲ್ಲಿ ಆರ್ಥಿಕವಾಗಿ ಬಹಳವಾಗಿ ಹಿಂದುಳಿದಿದ್ದಾರೆ. ಮಹಿಳೆಯರಿಗೆ ಮನೆಯಿಂದ ಹೊರಗೆ ಬಂದು ದುಡಿಯಲು ಇರುವ ಅವಕಾಶಗಳು ಬಹಳ ಕಡಿಮೆ ಇದೆ.
3. ಆಕಸ್ಮಾತ್ತಾಗಿ ಹೊರಗೆ ಬಂದು ದುಡಿದರೂ ಅವರಿಗೆ ಬರುವ ಕೂಲಿ ಬಹಳ ಕಡಿಮೆ. ಅಂದರೆ 15 ರಿಂದ 20ರೂ. ಅಲ್ಲದೇ ಕೇವಲ ತಾತ್ಕಾಲಿಕವಾಗಿ ಇರುತ್ತದೆ.
4. ತಾಂತ್ರಿಕ ಶಿಕ್ಷಣದಲ್ಲಿ ಮಹಿಳೆಯರ ಪ್ರಮಾಣ ಬಹಳ ಕಡಿಮೆ ಇದೆ.
5. ಮಹಿಳೆಯರು ಉತ್ಪಾದಿಸಿದ ವಸ್ತುಗಳ ಮಾರಾಟದ ಸಮಸ್ಯೆ ಇದೆ. ಪುರುಷರು ಬಹಳ ಸಶಕ್ತರಾಗಿದ್ದಾರೆ. ಮಹಿಳೆಯರು ತಾವು ತಯಾರಿಸಿದಂಥ ಪದಾರ್ಥಗಳಿಗೆ ಬೆಂಬಲ ಬೆಲೆ ಬರಲು ತಾವೇ ಮುಂದೆ ಬರಬೇಕು.

**ಸಲಹೆಗಳು:**

1. ವಿವಿಧ ಜಾಗೃತಿ ಶಿಬಿರಗಳ ಮೂಲಕ ಮಹಿಳೆಯರಿಗೆ ವಿವಿಧ ಉದ್ಯೋಗಗಳು ಅವುಗಳಿಗೆ ಇರುವ ಮಾರುಕಟ್ಟೆ, ಸವಲತ್ತು ಮುಂತಾದವುಗಳ ಬಗ್ಗೆ ಮಾಹಿತಿ ನೀಡಬೇಕು
2. ಮಹಿಳೆಯರಲ್ಲಿ ಸಂಘಟನೆ ಮತ್ತು ಮುಂದಾಳುತನ ಬೆಳೆಯಬೇಕು ಇದಕ್ಕೆ ಯೋಗ್ಯವಾದ ಗುಣಗಳನ್ನು ಪಡೆದವರನ್ನು ಆಯ್ಕೆ ಮಾಡಿ ತರಬೇತಿ ನೀಡಬೇಕು.
3. ಇ.ಡಿ.ಪಿ. ಕಾರ್ಯಕ್ರಮದನ್ವಯ ಎನ್.ಜ.ಓ.ಗಳ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಹಾಗೂ ನಗರ ಪ್ರದೇಶಗಳಲ್ಲಿ ಪೂರ್ಣ ಜ್ಞಾನ ನೀಡುವ ದೀರ್ಘಾವಧಿ ಶಿಬಿರ ಕಾರ್ಯಾಗಾರಗಳನ್ನು ಸಂಯೋಜಿಸಬೇಕು.
4. ಕಾಲ ಕಾಲಕ್ಕೆ ನಡೆಯುವ ಜಾಗೃತಿ ಶಿಬಿರಗಳನ್ನು, ಕಾರ್ಯಕ್ರಮಗಳು ಮಾಹಿತಿ ನೀಡುವ ಕಾರ್ಯಾಗಾರಗಳ ಬಗ್ಗೆ ಸಾಕಷ್ಟು ಪ್ರಚಾರವಾಗಿ ಎಲ್ಲರಿಗೂ ಮಾಹಿತಿ ದೊರೆಯಬೇಕು. ಸರ್ಕಾರ ನಡೆಸುತ್ತಿರುವ ಎಲ್ಲ ಕಾರ್ಯಕ್ರಮಗಳ ಬಗ್ಗೆ ಎಲ್ಲ ಮಹಿಳೆಯರಿಗೆ ಸೂಕ್ತ ವಿವರವು ಸಿಗಬೇಕು.
5. ಮಹಿಳೆಯರು ಉತ್ಪಾದಿಸುತ್ತಿರುವ ವಸ್ತುಗಳಿಗೆ ಸರಿಯಾದ ಮಾರುಕಟ್ಟೆಯು ದೊರೆಯಬೇಕು. ಇದಕ್ಕೆ ಸರಿಯಾದ ನೆಟ್ ವರ್ಕಿಂಗ್ ನಡೆಯಬೇಕು. ಸರ್ಕಾರ, ಸಹಕಾರಿ ಸಂಘಗಳು, ಎನ್‌ಜಿಓ ಇವರೆಲ್ಲರೂ ಕೂಡಿ ಈ ತರಹದ ನೆಟ್ ವರ್ಕಿಂಗ್ ಮಾಡಬೇಕು.
6. ಮಹಿಳೆಯರಿಗೆ ಸ್ವ ಉದ್ಯೋಗ ಪ್ರಾರಂಭಿಸಲು ವೈಯಕ್ತಿಕವಾಗಿ ಮತ್ತು ಗುಂಪುಗಳಿಗೆ ಯೋಗ್ಯವಾದ ಹಣ ಸಹಾಯ ನೀಡಬೇಕು. ಈಗ ಸ್ವಸಹಾಯ ಗುಂಪುಗಳಿಗೆ ನೀಡುತ್ತಿರುವ ಸಹಾಯ ಬಹಳ ಕಡಿಮೆಯಾಗಿದೆ. ಇದು ಸಮುದ್ರಕ್ಕೆ ಒಂದು ತೊಟ್ಟು ನೀರು ಹಾಕಿದ ಹಾಗಿದೆ.

7. ಪ್ರತಿಯೊಂದು ಹಳ್ಳಿಯಲ್ಲಿ ಸ್ವಸಹಾಯ ಗುಂಪಿನಲ್ಲಿ ಪ್ರತಿ ಒಬ್ಬ ಮಹಿಳೆಯು ಪಾಲ್ಗೊಳ್ಳುವ ಹಾಗೆ ಆಗಬೇಕು
8. ಬಿಪಿಎಲ್ ಸರ್ವೆಗಳ ವರದಿ ಪುನ: ಪರಿಶೀಲಿಸಬೇಕು.
9. ಪ್ರತಿಹಳ್ಳಿಯಲ್ಲಿ ಶಿಶುಪಾಲನಾ ಕೇಂದ್ರಗಳು ಆಗಬೇಕು.
10. ಮೂರು ತಿಂಗಳಿಗೊಮ್ಮೆ ವಸ್ತು ಪ್ರದರ್ಶನ ಆಗಬೇಕು.
11. ಮಹಿಳೆಯರಿಗಾಗಿ ಜಾರಿಯಲ್ಲಿರುವ ಕಾರ್ಯಕ್ರಮಗಳ ಸರಿಯಾದ ಮೇಲ್ವಿಚಾರಣೆಯ ಕಾಲ ಕಾಲಕ್ಕೆ ನಡೆಯಬೇಕು.
12. ವರ್ಷಕ್ಕೆ ಒಮ್ಮೆಯಾದರೂ ಈ ತರಹದ ಶಿಬಿರಗಳು, ಕಾರ್ಯಾಗಾರಗಳು ನಡೆಯಬೇಕು. ಈ ಕಾರ್ಯಾಗಾರಗಳು ಮೂರು ದಿವಸಕ್ಕೆ ನಡೆಯಬೇಕು.
13. ಗ್ರಾಮ ಪಂಚಾಯಿತಿಯಲ್ಲಿ ಮಹಿಳೆಯರಿಗೆ ಆಡಳಿತದಲ್ಲಿ ಪಾಲ್ಗೊಳ್ಳಲು ಸ್ವಾತಂತ್ರವಿರಬೇಕು.
14. ಪಂಚಾಯಿತ್‌ನಲ್ಲಿ ಚುನಾಯಿತರಾದ ಮಹಿಳೆಯರಿಗೆ ತರಬೇತಿ ವ್ಯವಸ್ಥೆಯಾಗಬೇಕು.
15. ಜಿಲ್ಲಾ ಮಟ್ಟದಲ್ಲಿ ಮಾರಾಟ ಮಳಿಗೆ ವ್ಯವಸ್ಥೆ ಆಗಬೇಕು.
16. ಹೈದರಾಬಾದ ಕರ್ನಾಟಕ ಪ್ರದೇಶದ ಅಭಿವೃದ್ಧಿಗಾಗಿ ಇರುವ ನೂರು ಕೋಟಿ ಬಜೆಟ್‌ನಲ್ಲಿ ಮಹಿಳೆಯರ ಅಭಿವೃದ್ಧಿಗಾಗಿ ಶೇಕಡಾ 30 ಮೀಸಲಾಗಿಡಬೇಕು.
17. ಮಹಿಳೆಯರಿಗೆ ನೀಡುತ್ತಿರುವ ಕೂಲಿ ದರದಲ್ಲಿ ಹೆಚ್ಚಳ ಆಗಬೇಕು.
18. ಮಹಿಳೆಯರಿಗೆ ವಿವಿಧ ಉದ್ಯೋಗದಲ್ಲಿ ಶೇಕಡಾ 50 ರಷ್ಟು ಮೀಸಲಾತಿ ಇಡಬೇಕು.
19. ಮಹಿಳೆಯರಿಗೆ ಪ್ರಾಥಮಿಕ ಹಾಗೂ ಉನ್ನತ ಶಿಕ್ಷಣಕ್ಕೆ ಮತ್ತು ವೃತ್ತಿಪರ ಶಿಕ್ಷಣಕ್ಕೆ ಯೋಗ್ಯವಾದ ಅವಕಾಶಗಳನ್ನು ಒದಗಿಸಿಕೊಡಬೇಕು.
20. ದೊಡ್ಡ ಪಟ್ಟಣಗಳಲ್ಲಿ ನಡೆಯುತ್ತಿರುವ ಪ್ರದರ್ಶನಗಳಿಗೆ ಹೋಗಲು ಹಾಗೂ ಭಾಗವಹಿಸಲು ಹಣ ಸಹಾಯವನ್ನು ನೀಡಬೇಕು.

## ರಾಜಕೀಯದಲ್ಲಿ ಮಹಿಳಾ ಸಶಕ್ತತತೆ

### ರಾಜಕೀಯದಲ್ಲಿ ಮಹಿಳಾ ಮೀಸಲಾತಿ ಸಮಾನತೆಯಡೆಗೆ ಒಂದು ಹೆಜ್ಜೆ

ಗುಲ್ಬರ್ಗಾನಗರದ ವಿ.ಜಿ. ಮಹಿಳಾ ಮಹಾವಿದ್ಯಾಲಯದ ಉಪನ್ಯಾಸಕಿಯಾದ ಸರಸ್ವತಿ ಚಿಮ್ಮಲಗಿ, ಪ್ರಸ್ತಾವನೆ ಮಂಡಿಸಿ ಮಾತನಾಡಿದರು. ಮಹಿಳಾ ಮಸೂದೆ ಲೋಕಸಭೆಯಲ್ಲಿ ಪಾಸ್ ಆಗಬೇಕು. ಆಗುತ್ತಿಲ್ಲ, ಆಗದಿರುವುದಕ್ಕೆ ರಾಜಕೀಯವೇ ಕಾರಣ.

**ಶಿವಕಾಂಶ ಚತುರ್ ಮಾಜಿ ಸಚಿವೆ, ಬೀದರ್:**

ರಾಜಕೀಯ ಅನುಭವ ಹಂಚಿಕೊಳ್ಳುವ ಕೆಲವು ಕಿವಿ ಮಾತುಗಳನ್ನು ಹೇಳಿದರು. ಈ ಹಿಂದೆ ಜಿಲ್ಲಾ ಉಸ್ತುವಾರಿ ಸಚಿವೆಯಾಗಿ ಸೇವೆ ಸಲ್ಲಿಸಿದ್ದೇನೆ ಎಂದರು. ರಾಷ್ಟ್ರಮಟ್ಟ ಹಾಗೂ ರಾಜ್ಯ ಮಟ್ಟದಲ್ಲಿ ಮಹಿಳೆಯರಿಗೆ ಮೀಸಲಾತಿ ಇರಬೇಕು.

**ಭಾನುಮತಿ ಕೃಷ್ಣಾ:**

ಕಷ್ಟಪಡುವವರು ಮಹಿಳೆಯರು. ಆದರೆ ಸ್ಥಾನಮಾನ ಸಿಗುವುದಿಲ್ಲ. ವಿರುದ್ಧ ಧ್ವನಿ ಎತ್ತುವಂತಾಗಬೇಕು.

**ಸುಲೋಚನಾ: ಹಾಲಮಂಡಗಿ**

ಉಪನ್ಯಾಸಕಿ ಅಕ್ಕಮಹಾದೇವಿ ಕಾಲೇಜ್, ಬೀದರ, ರಾಜಕಾರಣಕ್ಕೆ ಇಳಿದರೆ ಮಹಿಳೆಯಲ್ಲಿ ನೈತಿಕತೆ ಕಳೆದುಕೊಳ್ಳುತ್ತಾಳೋ ಎಂದು ರಾಜಕಾರಣಕ್ಕೆ ಬಿಡುವುದಿಲ್ಲ, ಇದು ಪುರುಷರಿಗೆ ಸಮಸ್ಯೆಯಾಗಿದೆ.

**ದ್ರೌಪದಿ ದಂದಿ:**

ಕಾಂಗ್ರೆಸ್ ಪಕ್ಷದ ಜಿಲ್ಲಾ ಮಟ್ಟದ ಕಾರ್ಯದರ್ಶಿಯಾಗಿ 23 ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಹಾಗೆ ಸೇವೆ ಸಲ್ಲಿಸಿದ ಮಹಿಳೆಯರಿಗೆ ಸಕ್ರಿಯ ರಾಜಕಾರಣದಲ್ಲಿ ಅವಕಾಶ ಸಿಗಬೇಕು ಎಂದು ಒತ್ತಾಯಿಸಿದರು.

**ಜ್ಯೋತಿ ಬಿ. ಕುಲಕರ್ಣಿ:**

ಮಹಿಳಾ ಸಮಖ್ಯಾ ಇದೊಂದು ಕೇಂದ್ರ ಸರ್ಕಾರದ ಯೋಜನೆ, ನಾವು ಗ್ರಾಮೀಣ ಮಹಿಳೆಯರು ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸಲು ತರಬೇತಿಗಳನ್ನು ನಡೆಸುತ್ತಿದ್ದೇವೆ. ಈ ಬಾರಿ 105 ಜನ 170 ಹಳ್ಳಿಗಳಿಂದ ಪಂಚಾಯಿತ್ ಚುನಾವಣೆಗೆ ಸ್ಪರ್ಧಿಸಿ ಅದರಲ್ಲಿ 48 ಜನ ಮಹಿಳೆಯರು (ದಲಿತ) ಆರಿಸಿ ಬಂದು ಇವತ್ತು ಪಂಚಾಯಿತದಲ್ಲಿ ಮಾತನಾಡುತ್ತಿದ್ದಾರೆ. ರಾಜ್ಯಮಟ್ಟದ ಮಹಿಳಾ ಸಮಖ್ಯಾದ ಮುಖಾಂತರ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಗೆದ್ದವರ ಸಂಖ್ಯೆ 400ಕ್ಕೂ ಮೀರಿದೆ. ಆದರೂ ಸಿಂಧಗಿ (ಗುಲ್ಬರ್ಗಾ ತಾಲ್ಲೂಕು ಮಹಾಗಾಂವ) (ಗುಲ್ಬರ್ಗಾ ತಾಲ್ಲೂಕು) ಗಳಂತಹ ಹಳ್ಳಿಗಳಲ್ಲಿ ಮಹಿಳೆಯರಿಗೆ ಶೋಷಣೆ ಇದೆ.

ಸರ್ಕಾರಕ್ಕೆ ಇದರ ಬಗ್ಗೆ ಕ್ರಮ ಜರುಗಿಸಲು ಒತ್ತಾಯಿಸಬೇಕೆಂದು ತಿಳಿಸಿದರು.

ಅದರಂತೆ ಮಹಿಳಾ ಸಮಖ್ಯಾ ಹಾಗೂ ಜಿಲ್ಲಾ ಪಂಚಾಯತ್ ಸದಸ್ಯರಾದ ಶಿವಯ್ಯ ಗುತ್ತೇದಾರರಿಂದ ಪ್ರೋತ್ಸಾಹ ದೊರೆತು ಅತ್ನೂರ್ ಪಂಚಾಯಿತ್ ಮಹಿಳಾ ಪಂಚಾಯತ್ ಆಗಿದೆ. ಆದರೆ ಇದಕ್ಕೆ ಅವಿರೋಧವಾಗಿ ಆಯ್ಕೆಯಾಗಿರುವುದಕ್ಕೂ ಮತ್ತೆ ಸರ್ವ ಮಹಿಳಾ ಪಂಚಾಯತ್ ಆಗಿರುವುದಕ್ಕೂ (ವಿಶೇಷ ಅನುದಾನ) ಸಿಕ್ಕಿಲ್ಲವೆಂದು ಸೂಚಿಸಿದರು.

ಅದರಂತೆ ಹೀಗೆ ಸಕ್ರಿಯ ರಾಜಕಾರಣದಲ್ಲಿ ಮಹಿಳೆಯರುಗಳಿಗೆ ಪ್ರೋತ್ಸಾಹ ಕೊಡುವ ಮಹಿಳಾ ಸಮಖ್ಯಾದಂತಹ ಯೋಜನೆಗಳಿಗೆ ಇವತ್ತು 2002ನೇ ಇಸವಿಯ ನಂತರ ಭವಿಷ್ಯ ಏನೆಂದು ಗೊತ್ತಿಲ್ಲ. ಇಲ್ಲಿಯ ಸಿಬ್ಬಂದಿಗಳ ಹಾಗೂ ಯೋಜನೆಯ ತತ್ವ ಅನುಭವ ಹಾಳಾಗಿ ಹೋಗಿದೆ ಅದಕ್ಕೆ ಸರ್ಕಾರ (ಕೇಂದ್ರ ಮತ್ತು ರಾಜ್ಯ) ಒಳ್ಳೆ ಕೆಲಸ ಕೊಟ್ಟು ಜಿಲ್ಲೆಗಳಲ್ಲಿ ಮುಂದುವರೆಯುವಂತಾಗಬೇಕು ಎಂದು ಮನವಿ ಮಾಡಿದರು. ಉಳಿದ ಮಹಿಳೆಯರು ಮಹಿಳೆ ಸಂಖ್ಯಾದವರು ಹಗಲು ರಾತ್ರಿ ಕೆಲಸ ಮಾಡುತ್ತಿದ್ದಾರೆ. ಆದ್ದರಿಂದ ಅವರ ಸೇವೆ ಎಲ್ಲ ಜಿಲ್ಲೆಗೆ ಅಗತ್ಯ ಎಂದು ಹೇಳಿದರು.

ಹೆಣ್ಣು ಮಕ್ಕಳ ಸಂಖ್ಯೆ ಶೇಕಡಾ 50ರಷ್ಟಿದ್ದರೂ ಗುಣಾತ್ಮಕವಾಗಿ ಬೆಳೆದಿಲ್ಲ. ಇದು ಆಗಬೇಕಾದರೆ ಆರ್ಥಿಕವಾಗಿ ರಾಜಕೀಯವಾಗಿ ಶಕ್ತರಾಗಬೇಕು. ಹೆಣ್ಣು ಮಕ್ಕಳಿಗೆ ಎಲ್ಲಿ ಅವಕಾಶ ಕೊಡುತ್ತಾರೆ ಎಂದರೆ ಗಂಡ ರಾಜಕೀಯದಲ್ಲಿದ್ದು ಸತ್ತರೆ ಅನುಕಂಪದ ಅಲೆಯನ್ನು ಗೆಲುವಿನ ಸೋಪಾನವಾಗಿ ಬೆಳೆಸಿಕೊಳ್ಳಲು ಹೆಣ್ಣು ಮಕ್ಕಳಿಗೆ ಅವಕಾಶ ಕೊಡುತ್ತಾರೆ. ಅದರ ಬದಲು ಸಕ್ರಿಯವಾಗಿ ಹಲವಾರು ವರ್ಷ ಸಕ್ರಿಯವಾಗಿ ಕೆಲಸ ಮಾಡಿದ ಹೆಣ್ಣು ಮಕ್ಕಳಿಗೆ ಅವಕಾಶ ಕೊಡಬೇಕು. ಗಂಡಸು ಮನಸ್ಸು ಮಾಡಿದರೆ ಅಡಿಗೆ ಮನೆಯಲ್ಲಿದ್ದ ಮಹಿಳೆ ಮುಖ್ಯಮಂತ್ರಿಯಾಗಹುದು. ಉದಾ: ರಾಬ್ಡಿದೇವಿ ಇದು ಏನನ್ನು ತೋರಿಸುತ್ತದೆ ಎಂದರೆ ಎಲ್ಲ ನಿರ್ಧಾರವು ಗಂಡಸಿನ ಕೈಯಲ್ಲಿ.

ರೋಸ್ಟರ್ ಪದ್ಧತಿ ಇರುವುದರಿಂದ ಒಂದು ಹಂತದಲ್ಲಿ ರಾಜಕೀಯವಾಗಿ ಅಂಬೆಗಾಲಿಡುತ್ತ ಬೆಳೆದ ಹೆಣ್ಣು ಮಕ್ಕಳು ಎರಡನೆಯ ಹಂತದಲ್ಲಿ ಅವಕಾಶದಿಂದ ವಂಚಿತಳಾಗುತ್ತಾಳೆ ಇದರಿಂದಾಗಿ ನಾಯಕತ್ವದ ಬೆಳವಣಿಗೆ ಕುಂಠಿತವಾಗುತ್ತದೆ. ಇದರ ಬಗ್ಗೆ ಸರ್ಕಾರವು ಗಮನ ಹರಿಸಬೇಕೆಂದು ಸಭೆಯು ತಿಳಿಸಿತು.

ವಿಚಾರ ಸಂಕೀರ್ಣಗಳ ಮುಖಾಂತರ ಮಹಿಳೆಯರಿಗೆ ಜಾಗೃತಿ ಮೂಡಿಸಿ ಸ್ಥಳೀಯ ಸಂಸ್ಥೆಗಳಲ್ಲಿ ಹಾಲಿ ಚಾಲ್ತಿಯಲ್ಲಿರುವ ಮೀಸಲಾತಿ ತಪ್ಪು ಎಂಬ ಅಭಿಪ್ರಾಯವನ್ನು ಹೋಗಲಾಡಿಸಬೇಕು.

ಈಗಾಗಲೇ ರಾಜಕೀಯದಲ್ಲಿರುವ ಮಹಿಳೆಯರು ಸರ್ಕಾರದಲ್ಲಿರುವ ಯೋಜನೆಗಳಲ್ಲಿ ಹಳ್ಳಿಯ ಬಡ

ಮಹಿಳೆಯರಿಗೆ ತಲುಪುವಂತೆ ಪ್ರಯತ್ನಿಸಬೇಕೆಂದು ಕರೆ ನೀಡಿದರು.

**ನಿರ್ಧಾರಗಳು:**

* ರಾಜಕೀಯದಲ್ಲಿ ಮಹಿಳೆಯರಿಗೆ ಮೀಸಲಾತಿ ಬೇಕೇ ಬೇಕು.
* ಮಹಿಳೆಯರ ಹೆಸರಿನಲ್ಲಿ ಆಸ್ತಿ ಇರುವುದು ಇಲ್ಲದೆ ಇರುವುದು ಸಮಾನ ಅದಕ್ಕೆ ಮುಕ್ತ ಸ್ಪರ್ಧೆ ಸಾಧ್ಯವಿಲ್ಲ (ಹಣವಿದ್ದರೆ ರಾಜಕಾರಣದಲ್ಲಿ ಸಕ್ರಿಯವಾಗಿ ಸಾಧಿಸುವುದು ಸ್ಪರ್ಧಿಸುವುದು ಸಾಧ್ಯವಿಲ್ಲ. ಅದಕ್ಕೆ ಮೀಸಲಾತಿ ಬೇಕೇ ಬೇಕು)
* ರಾಜಕೀಯದಲ್ಲಿ ಅಶಕ್ತರ ಧ್ವನಿಯಾಗಲು ಮಹಿಳೆಯರು ಸಮಸ್ಯೆಗಳಿಗೆ ನಾಲಿಗೆಯಾಗಲು ಮೀಸಲಾತಿ ಬೇಕು.
* ಕೆಲವೇ ಮಹಿಳೆಯರು ರಾಜಕಾರಣದಲ್ಲಿ ಬಂದರೆ ಸಂಶಯದಿಂದ ಕಾಣುತ್ತಾರೆ. ಆದ್ದರಿಂದ ಬೆಂಬಲಕ್ಕೆ ಹಲವಾರು ಮಹಿಳೆಯರು ರಾಜಕೀಯಕ್ಕೆ ಧುಮುಕಬೇಕಾಗಿದೆ.
* ರಾಜಕೀಯವನ್ನು ಪವಿತ್ರಗೊಳಿಸಲು ಮಹಿಳೆಯರ ಪ್ರವೇಶ ಅಗತ್ಯ ಆಗಿದೆ.
* ಪಕ್ಷಗಳ ರಾಜಕೀಯದಲ್ಲಿ ಪುರುಷ ಪ್ರಧಾನತೆ ಇದೆ. ಅದಕ್ಕೆ ಮೀಸಲಾತಿಯ ಮುಖಾಂತರ ಮಹಿಳೆಯರು ಪಕ್ಷದಲ್ಲಿ ಅದರ ಮುಖಾಂತರ ಅಧಿಕಾರದಲ್ಲಿ ಬರುವಂತಾಗಬೇಕು.
* ಮಹಿಳಾಪರ ಧೋರಣೆಯಿಂದ ಮಹಿಳೆಯರ ಕಲ್ಯಾಣಕ್ಕಾಗಿ ಪಾಲಿಸಿಗಳು ಬದಲಾಗಬೇಕು. ಪುರುಷ ಪ್ರಧಾನತೆಯಿಂದ ಸಮಾಜ ಮುಕ್ತಿ ಪಡೆದು ಸಮಾನತೆ ನಿಜವಾದ ಅರ್ಥದಲ್ಲಿ ರೂಪುಗೊಳ್ಳಬೇಕು.
* ಮೀಸಲಾತಿಯ ಮುಖಾಂತರ ಗ್ರಾಮಾಂತರ ಮಹಿಳೆಯರು ರಾಜಕೀಯದಲ್ಲಿ ಬಂದು ಗ್ರಾಮೀಣ ಹಾಗೂ ಬುಡಕಟ್ಟಿನ ಮಹಿಳೆಯರ ಪ್ರಾತಿನಿಧ್ಯ ರಾಜಕೀಯದಲ್ಲಿರಬೇಕು.

# ರೈತ ಮಹಿಳೆಯರ ಸಮಸ್ಯೆಗಳ ಕುರಿತು ಚರ್ಚಾಗೋಷ್ಠಿ

## ಮಹಿಳೆಯರ ಅಭಿವೃದ್ಧಿಯಲ್ಲಿ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳ ಪಾತ್ರ:

**ಈ ಚರ್ಚೆಯ ನಾಯಕತ್ವವನ್ನು ಡಾ. ಕಲಾವತಿ ಎಂ. ಪಾಟೀಲ ವರದಿಗಾರರು, ಸಂಪನ್ಮೂಲ ವಿಜ್ಞಾನಿ ಡಾ. ಎ. ಮುರಿಗೆಪ್ಪ, ವಹಿಸಿದ್ದರು.**

**ಈ ಮೇಲಿನ ಚರ್ಚೆಯಲ್ಲಿ ಸುಮಾರು ಹದಿನಾರು ಜನ ರೈತ ಮಹಿಳೆಯರು ಭಾಗವಹಿಸಿ ಚರ್ಚಿಸಿದ ವಿಷಯಗಳೆಂದರೆ:**

1. ರೈತ ಮಹಿಳೆಯರಿಗೆ ಹೆಚ್ಚಿನ ಆರ್ಥಿಕ ಸಹಾಯ ಬೇಕು. ಅಭಿವೃದ್ಧಿ ಯೋಜನೆಯಲ್ಲಿ ಒಂದು ಹೈನುರಾಸುವಿನ ಬದಲು ಎರಡು ಹೈನುರಾಸುಗಳನ್ನು ಕೊಡಬೇಕು.
2. ಸಮಾನ ಕೆಲಸಕ್ಕೆ ಸಮಾನ ವೇತನ ರೈತ ಕೂಲಿಕಾರ ಮಹಿಳೆಯರಿಗೆ ಪುರುಷರಷ್ಟೇ ಸರಿಸಮಾನವಾದ ದಿನಗೂಲಿ ಸಿಗಬೇಕು. ಉತ್ತಮ ಗುಣಮಟ್ಟದ ಸರಕುಗಳಿಗೆ ಉತ್ಪಾದನೆಯಾಗಬೇಕು.
3. ರೈತ ಬೆಳೆದ ಬೆಳೆಗೆ ಯೋಗ್ಯ ಬೆಲೆ ಸಿಗಬೇಕು. ಹೈನುರಾಸುಗಳಿಗೆ ಉತ್ತಮ ಮೇವಿನ ಪೂರೈಕೆಯಾಗಬೇಕು.
4. ಉತ್ತಮ ಕೊಟ್ಟಿಗೆ, ಗೊಬ್ಬರ (ತಯಾರಿಕೆ ಪರಿಸರ ಮಾಲಿನ್ಯ ತಡೆಗಟ್ಟುವಿಕೆ ರಾಸಾಯನಿಕ ಗೊಬ್ಬರದ ಬಳಕೆ ಕಡಿಮೆ ಮಾಡುವುದು.)

5. ರೈತ ಮಹಿಳೆಯರ ಮಕ್ಕಳಿಗೆ ಆರ್ಥಿಕ ಸಹಾಯ ಮಾಡಬೇಕು.
6. ತಾಲ್ಲೂಕು ಮಟ್ಟದಲ್ಲಿ ಹೈನುಗಾರಿಕೆ ತರಬೇತಿ ರೈತ ಮಹಿಳೆಯರಿಗೆ ಮೇವಿನ ಬೆಳೆಗಳ ಬಗ್ಗೆ ಪ್ರಾತ್ಯಕ್ಷಿಕ ತರಬೇತಿ ನೀಡಬೇಕು.
7. ಹೈನುರಾಸುಗಳು ಆಡು ಮತ್ತು ಕುರಿಗಳನ್ನು ಮೇಯಿಸಲಿಕ್ಕೆ ಗೋಮಾಳಗಳನ್ನು ನೀಡಬೇಕು.
8. ಮೇವು, ಹೊಟ್ಟು, ಕೃಷಿ ಉಪ ಪದಾರ್ಥಗಳನ್ನು ವೈಜ್ಞಾನಿಕವಾಗಿ ಉಪಚರಿಸಿ ಸಂಗ್ರಹಣೆ ಮಾಡುವ ನೂತನ ಪದ್ಧತಿಗಳನ್ನು ಅಳವಡಿಸಿಕೊಳ್ಳುವುದು.
9. ಮೀನು ಮರಿ ಉತ್ಪಾದನೆಯನ್ನು ಸ್ಥಳೀಯವಾಗಿ ಉತ್ಪಾದಿಸಿ ರೈತರಿಗೆ ಒದಗಿಸುವುದು.
10. ರೇಷ್ಮೆ ಕೃಷಿಯಲ್ಲಿ ಈ ಭಾಗದ ರೈತ ಮಹಿಳೆಯರು ಬಹಳ ಆಸಕ್ತಿ ವಹಿಸುತ್ತಲಿದ್ದು ರೇಷ್ಮೆ ಗೂಡಿಗೆ ಉತ್ತಮ ಮಾರುಕಟ್ಟೆ ಅಭಿವೃದ್ಧಿ ಪಡಿಸುವುದು. ರೇಷ್ಮೆ ನೂಲು ತೆಗೆಯಲು ರೈತ ಮಹಿಳೆಯರು ಇತರ ಮಹಿಳೆಯರಿಗೆ ತರಬೇತಿಯನ್ನು ಕೊಟ್ಟು ರಾಟಿ ಯಂತ್ರವನ್ನು ಕೊಡುವರು.
11. ತೋಟಗಾರಿಕೆ ಬೆಳೆಗಳಾದ ಹಣ್ಣುಗಳನ್ನು ಸಂಸ್ಕರಿಸುವುದು ಮತ್ತು ರೈತ ಮಹಿಳೆಯರಿಗೆ ತರಬೇತಿ ಕೊಡುವುದು.

* * * * * * *

# ಮಹಿಳಾ ಟಾಸ್ಕ್ ಫೋರ್ಸ್

# ಬೆಳಗಾವಿ ಕಾರ್ಯಾಗಾರದ ಸಂಕ್ಷಿಪ್ತ ವರದಿ

ಬೆಳಗಾವಿಯಲ್ಲಿ ದಿನಾಂಕ 27-1-2001 ರಂದು ನಡೆದ ವಿಭಾಗ ಮಟ್ಟದ ಕಾರ್ಯಾಗಾರದಲ್ಲಿ ಬೆಳಗಾವಿ ಉತ್ತರ ಕನ್ನಡ, ವಿಜಾಪೂರ, ಬಾಗಲಕೋಟೆ, ಹಾವೇರಿ, ಗದಗ, ಧಾರವಾಡ ಜಿಲ್ಲೆಗಳ ವಿವಿಧ ಕಡೆಗಳ ರೈತ ಮಹಿಳೆಯರು ಮಹಿಳಾ ಕಾರ್ಮಿಕರು, ಲೇಖಕಿಯರು ವಿದ್ವಾಂಸರು, ಮಹಿಳಾ ಸಂಘಟನೆಯ ಪದಾಧಿಕಾರಿಗಳು ಮುಂತಾದವರು ಭಾಗವಹಿಸಿದ್ದರು. ಈ ಕಾರ್ಯಾಗಾರವನ್ನು ಇಂಧನ ಖಾತೆ ಸಚಿವ ವೀರಕುಮಾರ್ ಪಾಟೀಲ್ ಅವರು ಉದ್ಘಾಟಿಸಿದರು. ಸ್ಥಳೀಯ ಶಾಸಕ ರಮೇಶ ಕುಡಚಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು, ಉದ್ಘಾಟನಾ ಸಮಾರಂಭದಲ್ಲಿ ಜಿಲ್ಲಾ ಪಂಚಾಯಿತ್ ಅಧ್ಯಕ್ಷೆ ಲಲಿತಾ ಚೌಗಲಾ, ಮಹಿಳಾ ಟಾಸ್ಕ್ ಫೋರ್ಸ್ ಸಮಿತಿ ಅಧ್ಯಕ್ಷೆ ಗುರಮ್ಮಾ ಸಿದ್ದಾರೆಡ್ಡಿ ಅಧ್ಯಕ್ಷತೆ ವಹಿಸಿದ್ದರು, ಸದಸ್ಯೆ ವಾಸಂತಿ ಶಿವಣ್ಣ, ಶಾಸಕ ಕಾಕಾಸಾಹೇಬ್ ಪಾಟೀಲ್, ಮೇಯರ್ ಶಿವಾಜಿರಾವ್ ಸುಂಠಕರ್, ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಅಂಜುಂ ಪರ್ವೇಜ್ ಮುಂತಾದವರು ಭಾಗವಹಿಸಿದ್ದರು. (ಅನುಬಂಧ) ಈ ಕಾರ್ಯಾಗಾರದಲ್ಲಿ ಮೂಡಿ ಬಂದ ಅಭಿಪ್ರಾಯಗಳ ಸಂಗ್ರಹ ರೂಪದ ವರದಿ ಇಲ್ಲಿದೆ.

## ಮಹಿಳಾ ಸಶಕ್ತೀಕರಣದಲ್ಲಿ ಶಿಕ್ಷಣದ ಮಹತ್ವ

**ಭಾಗವಹಿದವರು:**

1. ಶ್ರಿಮತಿ ಅಕ್ಕಮಹಾದೇವಿ ಕೆ.ಎಚ್. ಸದಸ್ಯರು ಶಿಶು ಅಭಿವೃದ್ಧಿ ಯೋಜನಾಧಿಕಾರಿ, ರಾಣೇಬೆನ್ನೂರು.
2. ಶ್ರಿಮತಿ ಸುಜಾತ ಭಟ್ಟ
3. ಶ್ರಿಮತಿ ನೇತ್ರಾವತಿಗೌಡರ
4. ಶ್ರಿಮತಿ ಲಕ್ಷ್ಮಿಗೌಡ
5. ಶ್ರಿಮತಿ ಗೌರವ್ವ ಕುಂದಗೋಳ
6. ಪ್ರೇಮಾ ಭಟ್ಟ
7. ಶ್ರಿಮತಿ ಪ್ರೇಮಾ ಕೋರಿಶಟ್ಟರ, ಉಪಾಧ್ಯಕ್ಷರು, ಹುಬ್ಬಳ್ಳಿ, ಕ.ಮ.ವಿ. ಮಂಡಳಿ
8. ಶ್ರಿಮತಿ ಸುನಿತಾ ಉ. ಉಚ್ಚನಕೊಪ್ಪ
9. ಶ್ರಿಮತಿ ರಮೀಮಬಾನು ಎಂ. ಹುಕ್ಕೇರಿ
10. ಶ್ರಿಮತಿ ಸುನೀತಾ ಹೂನವಾಡೆ, ವಿಜಾಪುರ
11. ಶ್ರಿಮತಿ ಚಿನ್ನವ್ವ ಕೊಕಟನೂರು, ವಿಜಾಪುರ
12. ಶ್ರಿಮತಿ ಶಾಂತಾದೇವಿ ಜ. ನಾಯಕ, ಕಾಂಗ್ರೆಸ್, ಮಹಿಳಾ ಘಟಕದ ಅಧ್ಯಕ್ಷಣಿ
13. ಶ್ರಿಮತಿ ಸುಮಿತ್ರಾ ಜಿ. ರಾಯ್ಕರ್ ಕಾಂಗ್ರೆಸ್ ಪಕ್ಷದ ಮಹಿಳಾ ಉಪಾಧ್ಯಕ್ಷರು ಬ್ಯಾಡಗಿ
14. ಶ್ರಿಮತಿ ಪ್ರತಿಮಾ ಬಾಳಹಾಳ
15. ಶ್ರಿಮತಿ ಲತಾ ಕುಲಕರ್ಣಿ
16. ಶ್ರೀ ಶಾರದಾ ತಮ್ಮಣ್ಣನವರ ತಾಲ್ಲೂಕು ಪಂಚಾಯಿತ್ ಉಪಾಧ್ಯಕ್ಷರು, ಹಾವೇರಿ

17. ಶ್ರೀಮತಿ ಕಲಾವತಿ ಗೋಳಿಪಟ್ಟಿ ಉಪಾಧ್ಯಕ್ಷರು, ಜಿಲ್ಲಾಪಂಚಾಯಿತ್, ಬಾಗಲಕೋಟೆ.

ಈ ಚರ್ಚೆಯ ನಾಯಕತ್ವವನ್ನು ಶ್ರೀಮತಿ ಕುಮಾರಿ ಸುನಂದಾ ಥವಳಗಿ, ಮ.ವಿ. ಅಭಿವೃದ್ಧಿ ಮಂಡಳಿ, ಹುಬ್ಬಳ್ಳಿ ವಹಿಸಿದ್ದರು.

**ನಿರ್ಣಯಗಳು:**

1. ಮಹಿಳೆಯರನ್ನು ಸುಶಿಕ್ಷಿತ, ಅಕ್ಷರಸ್ಥಳನ್ನಾಗಿ ಮಾಡಲು ಎಲ್ಲಾ ಮಹಿಳೆಯರಿಗೆ ಕಡ್ಡಾಯವಾಗಿ ಪ್ರಾಥಮಿಕ ಶಿಕ್ಷಣವನ್ನು ನೀಡಲು ಪ್ರೇರೇಪಿಸುವುದು.
2. ಗಂಡು ಮಕ್ಕಳಿಗೆ ಕೊಟ್ಟಷ್ಟೇ ಪ್ರೋತ್ಸಾಹವನ್ನು ಹೆಣ್ಣು ಮಕ್ಕಳಿಗೆ ಕೊಡುತ್ತಿಲ್ಲ. ಇದನ್ನು ಹೋಗಲಾಡಿಸಿ ಸಮಾನತೆಯನ್ನು ತರಬೇಕು.
4. ಹೆಣ್ಣು ಮಕ್ಕಳಿಗೆ ಅನೇಕ ತರಬೇತಿಗಳನ್ನು ನೀಡಿದರೆ ಮಾತ್ರ ಸಾಲದು, ಆ ತರಬೇತಿಗಳು ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡುವಂತಿರಬೇಕು.
5. ಹೆಣ್ಣು ಮಕ್ಕಳಲ್ಲಿರುವ ಕೀಳರಿಮೆಯನ್ನು ತೊಡೆದು ಹಾಕುವುದು.
6. ಅನಕ್ಷರತೆ, ಅಜ್ಞಾನದಿಂದ ಹೆಣ್ಣು ಭ್ರೂಣಹತ್ಯೆ, ಶಿಶುವಿನ ಮರಣಗಳು ಸಂಭವಿಸುತ್ತಿದ್ದು, ಹೆಣ್ಣು ಮಕ್ಕಳಿಗೆ ಅಕ್ಷರಜ್ಞಾನ, ಶಿಕ್ಷಣ ನೀಡುವುದರಿಂದ ಇದನ್ನು ತಡೆಗಟ್ಟಬಹುದು.
7. ಹೆಣ್ಣು ಮಕ್ಕಳಿಗೆ ಶಿಕ್ಷಣವನ್ನು ನೀಡುವುದರಿಂದ ವರದಕ್ಷಿಣೆ ಪೆಡಂಭೂತವನ್ನು ತೊಡೆದು ಹಾಕಿ, ಸ್ವಾಭಿಮಾನವನ್ನು ಬೆಳೆಸಬಹುದು.
8. ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಿನ ಮಹಿಳೆಯರು ಅಶಿಕ್ಷಿತರಾಗಿರುವುದರಿಂದ ಅವರಿಗೆ ಶಿಕ್ಷಣವನ್ನು ನೀಡಲು ಪ್ರತಿಯೊಂದು ಗ್ರಾಮಗಳಲ್ಲಿ ಸ್ವಯಂಸೇವಾ ಸಂಘಟನೆಗಳ ಮೂಲಕ ಶಿಕ್ಷಣದ ಜ್ಞಾನವನ್ನು ಬೆಳೆಸುವುದು.
9. ಸಾಕ್ಷರತೆ ಎಂದರೆ ಹೆಸರನ್ನು ಬರೆಯುವುದಕ್ಕೆ ಮಾತ್ರ ಸೀಮಿತವಾಗಿರದೆ ಓದು, ಬರಹ ಹಾಗೂ ವ್ಯವಹಾರ ಜ್ಞಾನದೊಂದಿಗೆ, ವಿವೇಚನಾಶಕ್ತಿಯನ್ನು ಹೆಚ್ಚಿಸುವುದು ಆಗಿರಬೇಕು.
10. ಮಹಿಳೆಯರಿಗೆ ಶಿಕ್ಷಣವನ್ನು ನೀಡುವುದರಿಂದ ಜನಸಂಖ್ಯಾ ನಿಯಂತ್ರಣವನ್ನು ಮಾಡಬಹುದು.
11. ಸರ್ಕಾರದಿಂದ ಅಥವಾ ಇನ್ನಾವುದೇ ಸವಲತ್ತುಗಳನ್ನು ನೀಡುವಾಗ ಮೊದಲು ಅದಕ್ಕೆ ಮೂಲ ಶಿಕ್ಷಣವನ್ನು ನೀಡಲು ಶಿಕ್ಷಣವು ಅತೀ ಅವಶ್ಯಕವಾಗಿದೆ.

ಒಂದು ಮನೆಯಲ್ಲಿ ತಾಯಿಯು ತನ್ನ ಕುಟುಂಬಕ್ಕೆ ಊಟವನ್ನು ಬಡಿಸಿ ತನಗೇ ಕಡಿಮೆ ಆದರೂ ಪರವಾಗಿಲ್ಲ. ಎಲ್ಲರಿಗೂ ಸಂತೃಪ್ತಿಯಾಗುವಂತೆ ಊಟವನ್ನು ಬಡಿಸುವಂತೆ, ಶಿಕ್ಷಣವನ್ನು ತನ್ನ ಕುಟುಂಬಕ್ಕೆ ಬಡಿಸಿದಲ್ಲಿ ಎಲ್ಲರೂ ಶಿಕ್ಷಿತರಾಗಿ ಸಮಾಜದ ಸ್ಥಾನಮಾನ ಹೆಚ್ಚುತ್ತದೆ. ಅದಕ್ಕೆ ಬಲ್ಲವರು ಹೇಳುತ್ತಾರೆ, **ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ, ಮನೆಯೇ ಮೊದಲ ಪಾಠಶಾಲೆ, ತಾಯಿಯೇ ಮೊದಲ ಗುರು.**

## ದೇವದಾಸಿಯರ ಸಮಸ್ಯೆಗಳು ಮತ್ತು ಪರಿಹಾರ

**ಸಲಹೆಗಳು:**

ದೇವದಾಸಿ ಒಂದು ಅನಿಷ್ಟ ಸಂಪ್ರದಾಯವಾಗಿ ಇದನ್ನು ನಿರ್ಮೂಲನ ಮಾಡಲು ಹಿಂದುಳಿದ ವರ್ಗದ ಮಹಿಳೆಯರಿಗೆ ಶಿಕ್ಷಣವನ್ನು ನೀಡಬೇಕು. ಸ್ವಾವಲಂಬಿಗಳಾಗಲು ಅವರಿಗೆ ಉದ್ಯೋಗವಕಾಶವನ್ನು ಒದಗಿಸಬೇಕು. ಕನಿಷ್ಠ ಪಿ.ಯು.ಸಿ.ವರೆಗೆ ಓದಿದವರಿಗೆ ಸರ್ಕಾರಿ ಇಲಾಖೆಯಲ್ಲಿ ನೇಮಕಾತಿಯಾಗಬೇಕು.

ದೇವದಾಸಿ ಪದ್ಧತಿಯಿಂದ ಮುಂದಾಗುವ ಕೆಟ್ಟ ಪರಿಣಾಮಗಳನ್ನು ತಿಳಿಸಿ ಹೇಳಲು ಮಹಿಳಾ ಸಂಘಟನೆಗಳ ಮೂಲಕ ಜಾಗೃತಿ ಸಭೆಗಳನ್ನು ಏರ್ಪಡಿಸಬೇಕು. ಆರೋಗ್ಯದ ಬಗ್ಗೆ ವಿವರಿಸಿ ಸೂಕ್ತ ಮಾರ್ಗದರ್ಶನ ನೀಡಬೇಕು.

ಈ ಕೆಳಗಿನ ಸೌಕರ್ಯಗಳನ್ನು ಒದಗಿಸಿದಲ್ಲಿ ದೇವದಾಸಿ ಸಮಸ್ಯೆಯನ್ನು ಪರಿಹಾರ ಮಾಡಲು ಸಾಧ್ಯವಾಗಬಹುದು.

ಈ ಗುಂಪಿನ ನಾಯಕತ್ವವನ್ನು ಶ್ರೀಮತಿ ಮೀನಾಕ್ಷಿ ವಿ. ಗಿರ್ಜಿ, ವಹಿಸಿದ್ದರು.

* ಅವರನ್ನು ಪ್ರತ್ಯೇಕವಾಗಿ ನೋಡಬಾರದು.
* ಶಿಕ್ಷಣ ಕಡ್ಡಾಯವಾಗಬೇಕು.
* ಆರೋಗ್ಯದ ಬಗ್ಗೆ ಹೆಚ್ಚು ತಿಳುವಳಿಕೆ ಮೂಡಿಸಬೇಕು.
* ಸ್ವಾವಲಂಬಿಯಾಗಲು ತರಬೇತಿ ನೀಡಬೇಕು. ಅವರು ಉತ್ಪಾದಿಸಿದ ವಸ್ತುಗಳ ಮಾರಾಟದ ವ್ಯವಸ್ಥೆಯಾಗಬೇಕು.
* ಎಲ್ಲ ಹಂತದಲ್ಲಿ ಸ್ಥಾನ ಮೀಸಲಾತಿ.
* ಕಾನೂನಿನ ತಿಳುವಳಿಕೆ.
* ಕೇವಲ ಅನುಕಂಪ ಬೇಡ, ದೇವದಾಸಿ ಮಕ್ಕಳಿಗೆ ಶಾಲೆಗೆ ಕಳುಹಿಸಿ ಸ್ವಾಭಿಮಾನದ ಬದುಕು ಸಾಧ್ಯವೆಂದು ತಿಳಿಸಲು ಸಹಾಯ ಮಾಡಬೇಕು.
* ಕೇವಲ ಉಚಿತ ಸಹಾಯ ಬೇಡ, ಆದರೆ ದುಡಿದು ಗಳಿಕೆಯ ಮಹತ್ವ ತಿಳಿಸುವುದು.
* ಕಷ್ಟದಲ್ಲಿರುವ ಮಹಿಳೆಯ ಸಮಸ್ಯೆ ಪರಿಹಾರ ನಡೆದಲ್ಲಿ ಮಹಿಳಾ ಮಂಡಳಿಗಳು ಸಕ್ರಿಯವಾಗಿ ಭಾಗವಹಿಸುವಂತೆ ಮಾಡುವುದು.
* ಸಹಾಯವಾಣಿ ಕೇಂದ್ರಗಳ ಸೇವೆ ಪ್ರಾರಂಭಿಸುವುದು.
* ಎಲ್ಲ ಸೇವಾ ಸಂಸ್ಥೆಗಳು, ಇಲಾಖೆಯ ಮಾಹಿತಿಯನ್ನು ನೀಡುವುದು. ಸಂಚಾರಿ ಸೇವಾ ಘಟಕದ ಮೂಲಕ ಅವರಿಗೆ ಸೂಕ್ತ ಪರಿಹಾರ ಹಾಗೂ ಮಾರ್ಗದರ್ಶನ ನೀಡಬೇಕು.

**ಭಾಗವಹಿಸಿದವರು:**

1. ಶ್ರೀಮತಿ ಮೀನಾಕ್ಷಿ ವಿ. ಗಿರ್ಜಿ, ಹಾವೇರಿ
2. ಶ್ರೀಮತಿ ಜಯಲಕ್ಷ್ಮಿ ಯರನಾಳ, ವಿಜಾಪೂರ
3. ಶ್ರೀಮತಿ ರಾಧಾ ಶಾರದಮ್ಮ ಧಾರವಾಡ
4. ಶ್ರೀಮತಿ ಭಾಗೀರಥಿ ಹೆಗಡೆ, ಶಿರಸಿ
5. ಶ್ರೀಮತಿ ವಿಜಯಲಕ್ಷ್ಮೀ ಶೇ. ತಮ್ಮನಗೌಡ್ರ, ಗದಗ
6. ಶ್ರೀಮತಿ ಪುಡಳಾಬಾಯಿ ವಾಗ್ರಿಕರ, ಗದಗ
7. ಶ್ರೀಮತಿ ಕಲಾವತಿ ಶಿಸ್ವಿನ ಹಳ್ಳಿ, ಗದಗ
8. ಬಸಮ್ಮ ಗಾಣಿಗೇರ, ಧಾರವಾಡ
9. ಕೆ.ಕೆ. ಎಜ್ಜರಮಟ್ಟಿ, ರಾಮದುರ್ಗ
10. ಎಲ್.ಸಿ. ಹಕೀರುರ, ಕೆ. ಚಂದರಗಿ
11. ಆರ್.ಐ. ಕಿಲ್ಲ ಅಯಾರಂಗವಾಟ
12. ಮುರುನ್ನಿಸಾ ಇ. ಕಿಲ್ಲೆದಾರ
13. ಈರಕ್ಕಾ ರಾ. ಸುಲಧಾಳ, ಬೆಳಗಾವಿ (ಗ್ರಾಮೀಣ ಕಾಕತಿ)
14. ಅನ್ನಪೂರ್ಣಾ ಮ. ಹಿರೇಮಠ

15. ಪೈರೋಜಾ ಮುಲ್ಲಾ, ಬೆಳಗಾವಿ, ಕಾಕತಿ
16. ನೀಲಾ ಹಾಲಭಾಂವಿ, ಬೆಳಗಾವಿ ಕಾಕತಿ
17. ಬಾಳವ್ವಾ ಮನ್ನೂರ, ರಾಮದುರ್ಗ
18. ದೇವದಾಸ ಡಿ. ಗಸ್ತಿ
19. ಲಕ್ಷ್ಮೀಕಾಂತ ಬೀಳಗಿ

## ಮಹಿಳೆಯರ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರಗಳು

1. **ವರದಕ್ಷಿಣೆಯ ಸಮಸ್ಯೆ:**
ಹೆಣ್ಣು ಮಗು ದೃಢ ನಿರ್ಧಾರ ಹೊಂದುವಂತಹ ಮತ್ತು ಆರ್ಥಿಕವಾಗಿ ಸ್ವಾವಲಂಬಿಯಾಗುವಂತಹ ತಿಳುವಳಿಕೆಯ ಶಿಕ್ಷಣ ನೀಡಬೇಕು. ಅಂತರಜಾತೀಯ ವಿವಾಹ ಆದವರಿಗೆ ಇಬ್ಬರಲ್ಲಿ ಒಬ್ಬರಿಗೆ ಸರ್ಕಾರಿ ನೌಕರಿ ಕೊಡಬೇಕು. ಇದರಿಂದ ಅವರ ಆರ್ಥಿಕ ಪರಿಸ್ಥಿತಿ ಸುಧಾರಿಸುತ್ತದೆ. ಇದರಿಂದ ವರದಕ್ಷಿಣೆಯ ನಿರಾಕರಣ, ಸಾಮಾಜಿಕ ಸ್ಥಾನಮಾನ, ಆತ್ಮಹತ್ಯೆಗಳಿಗೆ ಪರಿಹಾರ ಸಾಧ್ಯವಾಗುತ್ತದೆ.
2. **ಕೌಟುಂಬಿಕ ಹೊಂದಾಣಿಕೆ:**
ಕೆಲವೊಂದು ಕುಟುಂಬಗಳಲ್ಲಿ ಹೊಂದಾಣಿಕೆಯ ಸಮಸ್ಯೆ ಇರುತ್ತದೆ. ವಿವಾಹಪೂರ್ವದಲ್ಲಿ ಸ್ತ್ರೀ ಪುರುಷರಿಗೆ ಸಂಘ ಸಂಸ್ಥೆಗಳು ಹೋಗಿ ತಿಳುವಳಿಕೆ ನೀಡಬೇಕು. ಇದಕ್ಕೆ ಎಲ್ಲ ತಂದೆ-ತಾಯಿಗಳನ್ನು ತಯಾರು ಮಾಡಬೇಕು.
3. **ಅತ್ಯಾಚಾರ:**
ಇದಕ್ಕೆ ಸ್ತ್ರೀಯೂ ಕಾರಣ ಇಲ್ಲ. ಇದಕ್ಕಾಗಿ ತಂದೆ-ತಾಯಿಗಳು ಬಾಲಕ ಬಾಲಕಿಯರಿಗೆ ಒಳ್ಳೆಯ ಸಂಸ್ಕಾರ, ಲೈಂಗಿಕ ಜ್ಞಾನವನ್ನು ನೀಡಬೇಕು.
4. **ವಿಧವಾ ವಿವಾಹ:**
ವಿಧವೆಯ ಪುನರ್ವಿವಾಹವಾಗಲು ಸಮಾಜದಲ್ಲಿ ಸೂಕ್ತ ಪ್ರೋತ್ಸಾಹ, ಮಾನ್ಯತೆ ದೊರೆಯಲು ಸರ್ಕಾರ ಒಂದು ಬಲವಾದ ಯೋಜನೆ, ಕಾನೂನು ತರಬೇಕು. ಉಳಿದ ಸ್ತ್ರೀಯರಂತೆ ಆಕೆಯು ವೇಷಭೂಷಣ ಧರಿಸಲು ಅವಕಾಶ ಇರಬೇಕು. ಅವಳಿಗೆ ಎರಡನೇ ವಿವಾಹಕ್ಕೆ ಪ್ರೋತ್ಸಾಹ ಬೇಕು.
5. **ಮಧ್ಯಪಾನ:**
ಮಧ್ಯಪಾನ ನಿಷೇಧಿಸಬೇಕು. ಈ ಕಾನೂನನ್ನು ಸರ್ಕಾರವು ಕಟ್ಟುನಿಟ್ಟಾಗಿ ಜಾರಿಗೆ ತರಬೇಕು.
6. **ಜಾತಿ ಪದ್ಧತಿ:**
ಪ್ರತಿ ಸರ್ಕಾರಿ ಪತ್ರಗಳಲ್ಲಿ ಇರುವ ಜಾತಿಯ ಕಾಲಂ ತೆಗೆದುಹಾಕಬೇಕು. ನಾವು ಭಾರತೀಯರು ಎಂಬುದು ಮಾತ್ರ ಇದ್ದರೆ ಸುಧಾರಣೆಯಾಗುತ್ತದೆ.
7. **ಕೌಟುಂಬಿಕ ಕಿರುಕುಳ:**
ವಿವಾಹಿತ ಮಹಿಳೆಗೆ ಕೆಲವು ಗಂಡನ ಮನೆಯಲ್ಲಿ ಎಲ್ಲರಿಂದಲೂ ಮಾನಸಿಕ ಹಾಗೂ ಗಂಡನಿಂದ ದೈಹಿಕ ಕಿರುಕುಳ ಹೆಚ್ಚಾಗಿರುತ್ತದೆ. ಇದರಿಂದ ಸ್ತ್ರೀಯರ ಆತ್ಮಹತ್ಯೆ ಹೆಚ್ಚಾಗಿದೆ. ಕೌಟುಂಬಿಕ ಸಲಹಾ ಕೇಂದ್ರ ಈ ನಿಟ್ಟಿನಲ್ಲಿ ಮುಖ್ಯ ಪಾತ್ರವಹಿಸಬೇಕು.
8. **ಲಿಂಗಬೇಧ:**
ಸಮಾನ ಪ್ರಾಧಾನ್ಯತೆ ಸ್ತ್ರೀ ಪುರುಷರಿಗೆ ಸಿಗಬೇಕಾದರೆ ಭ್ರೂಣಹತ್ಯೆ ಆಗಬಾರದು. ಇದಕ್ಕೆ ಕಾನೂನು ಬದಲಾಗಬೇಕು. ಸಮಾನ (ದಿನಗೂಲಿ) ವೇತನ ಸಿಗಬೇಕು.

ಸ್ತ್ರೀಯರಿಗೆ ಉಚಿತ ಶಿಕ್ಷಣ ಸಿಕ್ಕರೆ ಅವರು ಶಿಕ್ಷಣದಲ್ಲಿ ಮುಂದೆ ಬರುವರು.
ಸ್ತ್ರೀಯರಿಗೆ ಅದರಲ್ಲಿಯೂ ಗರ್ಭಿಣಿಯರಿಗೆ ಉಚಿತ ವೈದ್ಯಕೀಯ ನೆರವು ಬೇಕು.

**9. ಬಾಲ್ಯ ವಿವಾಹ:**

ಇದನ್ನು ತಡೆಯಲು ಸ್ವಯಂಸೇವಾ ಸಂಸ್ಥೆಗಳು ಹಳ್ಳಿಗಳಲ್ಲಿ ಮನೆ-ಮನೆಗೆ ಹೋಗಿ ಜ್ಞಾನ, ಅರಿವು ನೀಡಬೇಕು; ವಿವಾಹ ವಯಸ್ಸನ್ನು ಸ್ತ್ರೀಯರಿಗೆ 21, ಪುರುಷರಿಗೆ 24 ಆಗುವಂತೆ ಕಾನೂನು ತರಬೇಕು.

**10. ಮಹಿಳಾ ಸಾಹಿತ್ಯ:**

1. ಸೃಜನಕ್ಕೆ ಮಹತ್ವ ನೀಡಬೇಕು. ಸಾಹಿತ್ಯದಲ್ಲಿ ಪ್ರತಿಭೆಗೆ ತಕ್ಕ ಅವಕಾಶ ಕೊಡಬೇಕು.
2. ಗೃಹಿಣಿ (ಮುಖ್ಯವಾಗಿ)ಯರು ಸಾಹಿತ್ಯ ರಚಿಸಿದಾಗ ಅವರಿಗೆ ಪ್ರೋತ್ಸಾಹ ಸಿಗಬೇಕು. ರಿಯಾಯಿತಿ ದರದಲ್ಲಿ ಪುಸ್ತಕ ಮಾರಾಟದ ವ್ಯವಸ್ಥೆಯಾಗಬೇಕು.
3. ಮಹಿಳಾ ಸಾಹಿತ್ಯಕ್ಕೆ, ಉತ್ತಮ ಪುಸ್ತಕಗಳಿಗೆ ನ್ಯಾಯವಾದ ಪ್ರಶಸ್ತಿಗಳು ಲಭಿಸಬೇಕು.
4. ಕೊಂಡು ಓದುವ ಪ್ರವೃತಿ ಬೆಳೆಯಲಿ ಎಂದು ಅಪೇಕ್ಷೆ.
5. ಹೊಸ ಪ್ರತಿಭೆಯ ಸಾಹಿತ್ಯಕ್ಕೆ ಉತ್ತಮ ಅವಕಾಶ ಅವಶ್ಯವಿದೆ.
6. ಸಾಹಿತ್ಯ ರಚಿಸಲು ಸಮಾಜದಿಂದ ಸೂಕ್ತ ಅವಕಾಶ ಬೇಕು. ಸಾಹಿತ್ಯ ಪ್ರತಿಭೆಗಳಿಗೆ ಆಗಾಗ ಕಾರ್ಯಕ್ರಮಗಳನ್ನಿಟ್ಟು ಸ್ಫೂರ್ತಿ ಸಮಾಜದಿಂದ ದೊರೆಯಬೇಕು.
7. ಸಾಹಿತ್ಯದಿಂದ ತನ್ನದೇ ಆದ ವ್ಯಕ್ತಿತ್ವ ಪ್ರತಿಬಿಂಬಿಸಲು ಸದಾವಕಾಶ ಬೇಕು.
8. ಮಹಿಳೆ ಸಾಹಿತ್ಯ ಎಂದು ಉದಾಸೀನ ಸಲ್ಲದ್ದು ಗಟ್ಟಿ ಸಾಹಿತ್ಯ ಗುರುತಿಸಿ ಪ್ರೋತ್ಸಾಹ ಸಿಗಬೇಕು.

## ಮಹಿಳೆಯ ಆರ್ಥಿಕ ಸ್ವಾವಲಂಬನೆ

ಈ ಗುಂಪಿನ ನಾಯಕತ್ವವನ್ನು ಛಾಯಾ ಹಿರೇಮಠ ಅವರು ವಹಿಸಿದ್ದರು.

**ಭಾಗವಹಿಸಿದ ಸದಸ್ಯರುಗಳು:**

1. ನೀಲವ್ವ ಬ. ಬೋಳನವರ
2. ಆಶಾದೇವಿ ಕುಲಕರ್ಣಿ
3. ಜಯಶ್ರೀ ಬರಡ್ಡಿ
4. ರೇಣುಕಾ ಬರಡ್ಡಿ
5. ಭಾಗ್ಯಶ್ರೀ ಲೋಕಾಪೂರಿ
6. ರಾಜೇಶ್ವರಿ ಶವಳ್ಳಿ
7. ಜ್ಯೋತಿವಸ್ತ್ರದ
8. ಇಂದ್ರವ್ವ ಲಮಾಣಿ
9. ಅಡ್ಡವ ಲಮಾಣಿ
10. ಶೋಭಾ ಪಾಟೀಲ
11. ಸುಮಂಗಲಾ ಮಶಿಗಣಿ
12. ನೀಲವ್ವ ಮಶಿಗಣಿ
13. ರೇಣುಕಾ ಡರಮಡಿ
14. ಪಿ.ಬಿ. ಭರಮನಾಯಕ

15. ಸರಸ್ವತಿ ಹೊಮ್ಮೆಗೌಡ್ರು
16. ರಮಾ ಧರ್ಮಾಧಿಕಾರಿ

**ಸಲಹೆಗಳು:**

1. ಮಹಿಳೆಯರ ಆರ್ಥಿಕ ಪರಿಸ್ಥಿತಿ ಸುಧಾರಣೆಗೆ ಮಧ್ಯಪಾನ ಸೇವಿಸುವುದನ್ನು ನಿಷೇಧಿಸಬೇಕು.
2. ಬ್ಯಾಂಕಿನಲ್ಲಿ ಮಹಿಳಗ ಶೇ. 1 ಬಡ್ಡಿ ಹೆಚ್ಚಿಗೆ ಕೊಡಬೇಕು.
3. ಮಹಿಳೆಯರಲ್ಲಿ ಉಳಿತಾಯ ಮನೋಭಾವನೆ ಬೆಳೆಸಿ ದುಡ್ಡನ್ನು ಸಂಗ್ರಹ ಮಾಡುವ ದಾರಿ ತೋರಿಸಬೇಕು. ಇದರಿಂದ ಆರ್ಥಿಕ ಸ್ಥಿತಿ ಸುಧಾರಿಸುತ್ತದೆ.
4. ಮಹಿಳೆಯರು ಉತ್ಪಾದಿಸಿದ ಕರ ಕುಶಲತೆಯ ಸಾಮಾನುಗಳಿಗೆ ಮಾರ್ಕೆಟಿನ ರೇಟು ಹೆಚ್ಚಿಸಬೇಕು.
5. ಶಿಕ್ಷಣದಲ್ಲಿ ಮಹಿಳೆಯರಿಗೆ ಹೆಚ್ಚಿನ ಸೌಕರ್ಯ ಸಿಕ್ಕು ಅವಳಿಗೆ ಹಣದ ಸಮಸ್ಯೆಯನ್ನು ಕಡಿಮೆ ಮಾಡಬೇಕು.
6. ಮಹಿಳೆಯರಿಗೆ ಬ್ಯಾಂಕಿನಲ್ಲಿ ಕಡಿಮೆ ದರದಲ್ಲಿ ಸಾಲ ಸಿಗಬೇಕು.
7. ಮಹಿಳೆಯರಿಗಾಗಿ ತಮ್ಮ ತಮ್ಮ ಆರ್ಥಿಕ ಪರಿಸ್ಥಿತಿಯ ಬಗ್ಗೆ ಚರ್ಚಿಸಲು ಗ್ರಾಮೀಣ ಭಾಗದಲ್ಲಿ ಮಹಿಳಾ ಮಂಡಳಿ, ಮಹಿಳಾ ಸಮುದಾಯ ಭವನವನ್ನು ಕಟ್ಟಿ ಅನುಕೂಲ ಮಾಡಬೇಕು.
8. ಮನೆಯಲ್ಲಿಯೇ ಕೈಗಾರಿಕೆ ಮತ್ತು ಹೈನುಗಾರಿಕೆ, ಬುಟ್ಟಿ ಹೆಣೆಯುವುದು ಇನ್ನೂ ಅನೇಕ ರೀತಿಯ ಗೃಹ ಕೈಗಾರಿಕೆಗಳಿಗೆ ಸರ್ಕಾರದಿಂದ ಅವರಿಗೆ ಹಣದ ಸೌಲಭ್ಯ ಸಿಗಬೇಕು.
9. ಮಹಿಳೆಯರು ಬೇರೆ ಬೇರೆ ಇಲಾಖೆಗಳಲ್ಲಿ ದುಡಿಯುತ್ತಿದ್ದು ಅವರಿಗೆ ವಸತಿ ಸೌಲಭ್ಯ ಬೇಕು.
10. ರೈತ ಮಹಿಳೆಗೆ ಬೇಕಾಗುವ ಗೊಬ್ಬರ, ಬೀಜ ಸರ್ಕಾರದಿಂದ ಕಡಿಮೆ ಬೆಲೆಗೆ ಸಿಗಬೇಕು.

## ರಾಜಕೀಯದಲ್ಲಿ ಮಹಿಳಾ ಸಶಕ್ತೀಕರಣ

**ಶ್ರೀಮತಿ ವಾಸಂತಿ ಶಿವಣ್ಣನವರು ಗುಂಪಿನ ನಾಯಕತ್ವ ವಹಿಸಿದ್ದರು**

**ಭಾಗವಹಿಸಿದ ಸದಸ್ಯರು:**

1. ಪಟವರೆ, ಬೆಳಗಾವಿ.
2. ಶೋಭಾ ಎಂ. ಕೊಡಳ್ಳಿ, ಬೆಳಗಾವಿ.
3. ಹೇಮಲತಾ ದೇಸಾಯಿ, ಗದಗ.
4. ಕಲ್ಪನಾ ತಮ್ಮಣ್ಣನವರ, ಬೆಳಗಾವಿ.
5. ಸಾವಿತ್ರಿ ಕಲೆ: ದೇವರ, ಬೆಳಗಾವಿ.
6. ರೀಟಾ ರಸ್ಕೀನ್, ಹುಬ್ಬಳ್ಳಿ.
7. ಇಂದಿರಾ ಕಟ್ಟಿಮನಿ, ಧಾರವಾಡ.
8. ಎಸ್.ಆರ್. ತೆಂಡೂಲಕರ, ಬೆಳಗಾವಿ.
9. ಡಿಸಿಲ್ವಾ, ಬೆಳಗಾವಿ.
10. ಪಾಡಕರ, ಬೆಳಗಾವಿ.
11. ಮೋಹನದಾರ, ಬೆಳಗಾವಿ.
12. ವಡಗಾಂವಕರ, ಬೆಳಗಾವಿ.
13. ಸುನಂದಾತೋಟರ, ಬೆಳಗಾವಿ.

14. ಎಸ್.ಎಂ. ಹುಕ್ಕೇರಿ, ಅಥಣಿ.
15. ಎಂ.ಎಸ್. ಗಣಾಚಾರಿ, ಸವದತ್ತಿ.
16. ಸುನೀತಾ ಉಮೇಶ, ಗುಜನಕೊಪ್ಪ.
17. ಸಪುರಾಜೇಗರ ಮುಲ್ಲಾ, ಎಲಿಮನಹಳ್ಳಿ.
18. ಸಂಗೀತಾ ಹರಿಜನ, ಹೊಸೂರ.
19. ಬೀರವ್ವ ಶಿವಣ್ಣವೋಳ, ಹುಬ್ಬಳ್ಳಿ.
20. ಸುರೇಶ ಜನಜನಪು, ಬಸ್ಸಾಪುರ.
21. ನೀಲವ್ವ ಕರುಣೆ ಹಾರೇಗೌರು.
22. ತೇಜಸ್ವಿನಿ ನಾಯಕ, ಕಂಕನವಾಡಿ
23. ಮಂಗಲನಾಯಿಕ, ರಾಯಭಾಗ

**ಚರ್ಚೆಯಲ್ಲಿ ಮೂಡಿ ಬಂದ ಅಭಿಪ್ರಾಯಗಳು:**

ಈ ಗುಂಪಿನ ನಾಯಕತ್ವವನ್ನು ಶ್ರೀಮತಿ ವಾಸಂತಿ ಶಿವಣ್ಣರವರು ವಹಿಸಿದ್ದರು. ಈ ಗುಂಪಿನಲ್ಲಿ ಸುಮಾರು 14 ಜನ ಮಹಿಳಾ ಸದಸ್ಯರಿದ್ದರು. ಈ ಎಲ್ಲ ಸದಸ್ಯರು ವಿವಿಧ ಜಿಲ್ಲೆಗಳಿಂದ ಪ್ರತಿನಿಧಿಸಿದ್ದು ಹಾಗೂ ಸಮಾಜದ ವಿವಿಧ ಸ್ಥಳಗಳಲ್ಲಿ ಕಾರ್ಯ ನಿರ್ವಹಿಸುವವರಾಗಿದ್ದು, ಜಿ.ಪಂ. ಸದಸ್ಯರು, ಟಾಸ್ಕ್ ಫೋರ್ಸ್ ಸಮಿತಿಯ ಸದಸ್ಯರು, ಪತ್ರಕರ್ತರು, ಸಮಾಜ ಸೇವಕರು, ಸರ್ಕಾರಿ ಸೇವೆಯಲ್ಲಿ ಕೆಲಸ ನಿರ್ವಹಿಸುವವರು ಭಾಗವಹಿಸಿದ್ದರು. ಪ್ರಥಮವಾಗಿ ಗುಂಪಿನ ನಾಯಕಿ ಶ್ರೀಮತಿ ವಾಸಂತಿ ಶಿವಣ್ಣ ಇವರು ರಾಜಕೀಯದಲ್ಲಿ ಮಹಿಳಾ ಸಶಕ್ತೀಕರಣ ವಿಷಯದ ಕುರಿತು ತಿಳಿಸಿದರು.

ಮೀಸಲಾತಿ ನೀಡಿ, ಆರಿಸಿ ಬಂದಾಕ್ಷಣ ಮಹಿಳೆಯ ಜವಾಬ್ದಾರಿ ಮುಗಿಯುವುದಿಲ್ಲ. ತಾನು ಆ ಹುದ್ದೆಗೆ ಹೇಗೆ ಆರಿಸಿ ಬಂದಿರುವೆ? ತನ್ನ ಜವಾಬ್ದಾರಿ ಏನು? ತನ್ನ ಅಧಿಕಾರ ವ್ಯಾಪ್ತಿ ಏನು? ತನ್ನಿಂದ ಸಮಾಜ ಏನೇನು ಬಯಸುತ್ತದೆ? ಎಂಬುದನ್ನು ತಾನು ತಿಳಿದುಕೊಳ್ಳುವುದು ಅತೀ ಅವಶ್ಯ ಎಂದು ಹೇಳಿದರು.

ನಂತರ ಗುಂಪಿನ ಎಲ್ಲ ಸದಸ್ಯರಿಗೂ ಒಬ್ಬೊಬ್ಬರಾಗಿ ಅವರ ಅನುಭವ ಹೇಳಿಕೊಳ್ಳಲು ಅವಕಾಶ ನೀಡಲಾಯಿತು.

**ಅಭಿಪ್ರಾಯಗಳು:**

1. ನಾವು ಚುನಾವಣೆಗೆ ನಿಲ್ಲುವಾಗ ಸಮಾಜದ ಹಾಗೂ ಕುಟುಂಬದ ಜನರಲ್ಲಿ ನಮ್ಮನ್ನು ಒತ್ತಾಯಪೂರ್ವಕವಾಗಿ ಚುನಾವಣೆಗೆ ನಿಲ್ಲಿಸಿ ಆರಿಸಿ ಬಂದ ತಕ್ಷಣ ಹೊರಗೆ ಹೋಗಲು ಆಸಕ್ತಿ ಇದ್ದ ಮಹಿಳೆಯರು ಮಾತ್ರ ಚುನಾವಣೆಗೆ ನಿಲ್ಲಬೇಕು.
2. ಕೆಲವೊಂದು ಕಡೆ ಮೀಸಲಾತಿ ಇದ್ದರೂ ಸಾಕಷ್ಟು ಜನ ಮಹಿಳೆಯರು ಚುನಾವಣೆಗೆ ನಿಲ್ಲಲು ಬರುತ್ತಿಲ್ಲ.
3. ಹೆಂಡತಿ ಆಯ್ಕೆಯಾಗಿ ಬಂದರೂ ಕೂಡಾ, ಅನೇಕ ಕಡೆ ಅವರ ಗಂಡಂದಿರು ಆಡಳಿತ ನಡೆಸುತ್ತಾರೆ. ಇದನ್ನು ಹೋಗಲಾಡಿಸಬೇಕಾದರೆ, ಮಹಿಳೆ ಆದವರು ತನ್ನಲ್ಲಿ ತಾನು ಆತ್ಮವಿಶ್ವಾಸ ಬೆಳೆಸಿಕೊಳ್ಳಬೇಕು. ಇಲಾಖೆಯ ವಿವಿಧ ಯೋಜನೆಗಳನ್ನು ತಿಳಿದುಕೊಳ್ಳಬೇಕು. ಆಕೆ ತಿಳಿದುಕೊಂಡಾಗ ಮಾತ್ರ ಭಾಗವಹಿಸಲು ಸಾಧ್ಯ.
4. ಗ್ರಾ.ಪಂ/ತಾ.ಪಂ/ಜಿ.ಪಂ. ಚುನಾವಣೆಗೆ ನಿಲ್ಲುವ ಮಹಿಳೆಯರಿಗೆ ಶಿಕ್ಷಣ ಕಡ್ಡಾಯವಾಗಿರಬೇಕು.
5. ರಾಜಕೀಯದಲ್ಲಿ ಸಾರ್ವಜನಿಕ ವೇದಿಕೆಯನ್ನು ನಿರ್ಮಾಣ ಮಾಡಿ, ಅಭ್ಯರ್ಥಿಗಳು ಮನೆ ಮನೆಗೆ ಹೋಗಿ ಮತ ಕೇಳುವ ಬದಲು ಸಾರ್ವಜನಿಕ ಬೇಡಿಕೆಯಡಿ ಎಲ್ಲ ಪಕ್ಷಗಳ ಅಭ್ಯರ್ಥಿಗಳಿಗೆ ಮಾತನಾಡುವ ಅವಕಾಶ

ನೀಡಬೇಕು. ಆಗ ಮಾತ್ರ ರಾಜಕೀಯ ಭ್ರಷ್ಟಾಚಾರ ತಡೆಯಲು ಸಾಧ್ಯ.

6. ಮಧ್ಯಪಾನ ನಿಷೇಧಕ್ಕೆ ಸಮಾಜವನ್ನು ಅಣಿಗೊಳಿಸಬೇಕು.
7. ಸಮಾಜಕ್ಕೆ ತಮ್ಮ ಹಕ್ಕು ಬಾಧ್ಯತೆಗೆ ಅರಿವು ನೀಡಿ, ಚುನಾಯಿತ ಪ್ರತಿನಿಧಿಗಳಿಂದ ಕೆಲಸ ಮಾಡಿಕೊಳ್ಳುವ ಶಕ್ತಿ ಬರಬೇಕು.
8. ಎಸ್‌ಸಿ, ಎಸ್‌ಟಿ ಮೀಸಲಾತಿಯಲ್ಲಿ ಚುನಾಯಿತರಾದ ಹೆಣ್ಣು ಮಕ್ಕಳು ಕೆಲಸ ಮಾಡಲು ಕಷ್ಟವೆಂದು ತಿಳಿಸಿದ ಕಾರಣ ತಮ್ಮ ಅಧಿಕಾರ ಚಲಾಯಿಸಲು ತಿಳಿದುಕೊಳ್ಳಬೇಕು.
9. ಮಹಿಳಾ ರಾಜಕೀಯ ಪ್ರತಿನಿಧಿಯ ಬಗ್ಗೆ ಸಮಾಜದ ದೃಷ್ಟಿಕೋನ ಬದಲಾಗಬೇಕು. ರಾಜಕೀಯ ಹೆಣ್ಣು ಮಗಳ, ಆತ್ಮಸ್ಥೈರ್ಯ ಬೆಳೆಸಿಕೊಳ್ಳಬೇಕು.
10. ಕುಟುಂಬ ಕಲ್ಯಾಣ ಯೋಜನೆಯನ್ನು ಚುನಾಯಿತ ಮಹಿಳೆಯರು ಮೊದಲು ಅಳವಡಿಸಿಕೊಳ್ಳಬೇಕು.
11. ಚುನಾಯಿತ ಸದಸ್ಯರು ಸಮಾಜ ಸುಧಾರಣೆಯಲ್ಲಿ ಮುಖ್ಯವಾಗಿರುವ ಆರೋಗ್ಯ, ಶಿಕ್ಷಣ ಜಾತೀಯತೆ, ಬಾಲಕಾರ್ಮಿಕ, ದೇವದಾಸಿ, ಪದ್ಧತಿ, ಶಾಲೆ ಬಿಡುವ ಮಕ್ಕಳ ಕುರಿತು ವೃತ್ತಿ ತರಬೇತಿ ಸಂಪನ್ಮೂಲ ಕ್ರೋಢೀಕರಣ ಮುಂತಾದ ವಿಷಯಗಳನ್ನು ಆದ್ಯತೆಯ ಮೇಲೆ ಪರಿಗಣಿಸಿ ಅವುಗಳ ಅಭಿವೃದ್ಧಿಗಾಗಿ ಶ್ರಮಿಸಬೇಕು.
12. ಹೆಣ್ಣು ಮಕ್ಕಳಿಗೆ ಕಂಡೆನ್ಸ್ ಕೋರ್ಸ್ ಹಾಗೂ ವಯಸ್ಕರ ಶಿಕ್ಷಣ ಪದ್ಧತಿಯನ್ನು ಕಡ್ಡಾಯವಾಗಿ ಜಾರಿಯಲ್ಲಿ ತರಬೇಕು.
13. ಚುನಾಯಿತ ಸದಸ್ಯರಿಗೆ ಈಗಾಗಲೇ ಎಲ್ಲ ಹಂತಗಳಲ್ಲಿ ತರಬೇತಿಯನ್ನು ನೀಡುತ್ತಿದ್ದರೂ ಅದರ ಸದ್ಬಳಕೆಯನ್ನು ಸದಸ್ಯರು ಮಾಡಿಕೊಂಡು ಕಾರ್ಯ ನಿರ್ವಹಿಸಬೇಕು.
14. ವಿಧಾನಸಭೆ ಹಾಗೂ ಲೋಕಸಭೆಗಳಲ್ಲಿ ಮೀಸಲಾತಿ 33 ಶೇಕಡಾ ನೀಡಬೇಕು.
15. ಮಹಿಳೆಯರು ರಾಜಕಾರಣದಲ್ಲಿ ಭಾಗವಹಿಸಬೇಕಾದರೆ ಮೊದಲು ಸಮಾಜದಲ್ಲಿ ಒಳ್ಳೆಯ ಕೆಲಸ ಮಾಡಿರಬೇಕು. ನಂತರ ರಾಜಕಾರಣದಲ್ಲಿ ಕಾಲಿಡಬೇಕು. ಚುನಾವಣೆಗೆ ನಿಲ್ಲುವುದಾದಾರೆ ಜನರು ಅವರ ಮೇಲೆ ಒಳ್ಳೆ ಆಸಕ್ತಿ ಇರಬೇಕು. ಹೆಣ್ಣು ಮಕ್ಕಳಿಗೆ ಅಧಿಕಾರ ಸಿಕ್ಕರೆ, ಆಶೆ ಆಮಿಷಗಳಿಲ್ಲದೇ ಮಹಿಳೆಯರ ಕೆಲಸವನ್ನು ಮಾಡಬೇಕು ಮತ್ತು ಪ್ರತಿಯೊಂದು ಯೋಜನೆಗಳನ್ನು ತಿಳಿದಿರಬೇಕು.

## ರೈತ ಮಹಿಳೆಯರ ಸಮಸ್ಯೆಗಳಿಗೆ ಪರಿಹಾರಗಳು

**ಶ್ರೀಮತಿ ಆರ್. ಬೂದಿಹಾಳ ಇವರು ಈ ಗುಂಪಿನ ನೇತೃತ್ವ ವಹಿಸಿದ್ದರು.**

**1. ಶಿಕ್ಷಣದ ಮಹತ್ವ:**

* ರೈತ ಹೆಣ್ಣು ಮಕ್ಕಳಿಗೆ ಶಿಕ್ಷಣ ಕಡಿಮೆ. ಇದರಿಂದಾಗಿ ಅವರ ಎಲ್ಲ ಪ್ರಗತಿ ಕುಂಠಿತವಾಗುತ್ತಿದೆ.
* ಸೌಲಭ್ಯಗಳು ಮತ್ತು ಅವಕಾಶಗಳನ್ನು ಸಮನಾಗಿ ಕೊಡಬೇಕು.
* ರೈತ ಮಹಿಳೆಯರಿಗೆ ಶಿಕ್ಷಣವನ್ನು ಕೊಡಬೇಕು ಮತ್ತು ಅರಿವಿನ ಮಟ್ಟವನ್ನು ಏರಿಸುವಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.
* ಮಹಿಳೆಯರನ್ನು ಸಂಘಟಿಸುವ ಪ್ರಯತ್ನಗಳು ನಡೆಯಬೇಕು.
* ಅವರಿಗೆ ಸ್ವಾವಲಂಬಿಗಳಾಗಲು ಸ್ವಾಭಿಮಾನವನ್ನು ನಾಯಕತ್ವವನ್ನು ಬೆಳೆಸಲು ವಿವಿಧ ತರಬೇತಿಗಳನ್ನು ಏರ್ಪಡಿಸಬೇಕು.

**2. ಆರ್ಥಿಕ ಸುಧಾರಣೆ:**

* ಬಿಡುವಿರುವಾಗ ದುಡಿಯಲು ಅವಕಾಶ ಸಿಗಬೇಕು.
* ಪುರುಷರಂತೆ ಸ್ತ್ರೀಯರಿಗೆ ಸಮಾನ ಕೂಲಿ ದೊರೆಯಬೇಕು.
* ಗುಡಿ ಕೈಗಾರಿಕೆಗಳಿಗೆ ಆರ್ಥಿಕ ಸೌಲಭ್ಯಗಳನ್ನು ಸರಿಯಾಗಿ ಒದಗಿಸಬೇಕು.

* ಮಹಿಳೆಯರು ಮುದುಕರಾದಾಗ, ವಿಧವೆಯರಾದಾಗ, ಅಸ್ವಸ್ಥರಾದಾಗ, ಗರ್ಭಿಣಿಯರಾದಾಗ, ಆರ್ಥಿಕ ನೆರವನ್ನು ಕಲ್ಪಿಸಬೇಕು.
* ವೃದ್ಧರಿಗಾಗಿ ಆಶ್ರಮಗಳನ್ನು ತೆರೆಯಬೇಕು.
* ಸಾಲದ ಸೌಲಭ್ಯಗಳನ್ನು ಸರಿಯಾದ ಸಮಯಕ್ಕೆ ಒದಗಿಸಬೇಕು.

**3. ಜಾಗೃತಿ ಮೂಡಿಸುವುದು:**

* ರೈತ ಮಹಿಳೆಯರಿಗೆ ವಿವಿಧ ಮಾಧ್ಯಮಗಳು ಮೂಲಕ ಕೃಷಿಯ ತಿಳುವಳಿಕೆ ಮಾಡಿಸಬೇಕು.
* ಸರ್ಕಾರಿ ಯೋಜನೆಗಳ ಸಾಲ ಸೌಲಭ್ಯಗಳ ಮತ್ತಿತರ ಮಹಿಳೆಯರ ವಿಶೇಷ ಯೋಜನೆಗಳ ಅರಿವನ್ನು ಇಲಾಖೆಗಳ ಮುಖಾಂತರ ಪ್ರತಿಯೊಬ್ಬರಿಗೆ ತಲುಪುವಂತೆ ಮಾಡಬೇಕು.
* ಬಡತನ ರೇಖೆಯ ಕೆಳಗಡೆ ಇರುವ ಎಲ್ಲಾ ಕೃಷಿ ಮಹಿಳೆಯರಿಗೆ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡದ ಭೇಧವಿಲ್ಲದೆ ಎಲ್ಲ ಮಹಿಳೆಯರಿಗೆ ಸರಿ ಸಮಾನವಾಗಿ ನೆರವು ನೀಡಬೇಕು.

**4. ಮಾರುಕಟ್ಟೆ ಸಮಸ್ಯೆ:**

* ಬೆಳೆದ ಬೆಳೆಗಳಿಗೆ ಸರಿಯಾದ ಬೆಲೆ ಸಿಗುವಂತಾಗಬೇಕು.
* ದಲ್ಲಾಳಿಗಳ ಕುತಂತ್ರದಿಂದ ವಿಮುಕ್ತ ದೊರೆಯಬೇಕು.
* ಬೆಳೆಗಳಿಗೆ ತಕ್ಕ ಸಂಸ್ಕರಣಾ ದಾಸ್ತಾನು ಕೊಠಡಿಗಳನ್ನು, ಶೈತ್ಯಾಗಾರಗಳನ್ನು ನಿರ್ಮಿಸಿ ಪರಿಹಾರ ಒದಗಿಸಬೇಕು.

**5. ನೀರಾವರಿ ಸಮಸ್ಯೆ:**

* ಮಳೆ ಕಡಿಮೆಯಾಗಿ ಬೆಳೆ ಸರಿಯಾಗಿ ಬರುತ್ತಿಲ್ಲ.
* ನೀರಾವರಿ ಸೌಲಭ್ಯ ಎಲ್ಲ ಕಡೆಯೂ ಇಲ್ಲ. ಇದ್ದರೂ ಕೂಡ ವಿದ್ಯುತ್ ಆಭಾವವಿದೆ.
* ಇದರಿಂದ ರೈತ ಕುಟುಂಬಗಳಿಗೆ ಆರ್ಥಿಕವಾಗಿ ಸ್ವಾವಲಂಬಿಗಳಾಗಲು ಸಾಧ್ಯವಾಗುತ್ತಿಲ್ಲ.
* ಇದಕ್ಕಾಗಿ ಅಂತರ್ಜಲ ಮಟ್ಟವನ್ನು ವೃದ್ಧಿ ಪಡಿಸುವ ಪ್ರಯತ್ನ ಆಗಬೇಕು.

**6. ಕೃಷಿ ತಾಂತ್ರಿಕತೆಯ ಸಮಸ್ಯೆಗಳು:**

* ಸುಧಾರಿತ ಬೀಜಗಳು, ಗೊಬ್ಬರಗಳು, ಕ್ರಿಮಿನಾಶಕಗಳು, ಮತ್ತಿತರ ಉಪಕರಣೆಗಳು ಸರಿಯಾದ ಸಮಯಕ್ಕೆ ಲಭ್ಯವಾಗಬೇಕು.
* ಆಧುನಿಕ ಕೃಷಿ ಪದ್ಧತಿಯ ಹಾಗೂ ತಂತ್ರಜ್ಞಾನಗಳ ಬಗ್ಗೆ ಅರಿವು ಮೂಡಿಸುವ ತರಬೇತಿಗಳು ಆಗಬೇಕು.
* ಕೃಷಿ ಇಲಾಖೆಯಿಂದ ರೈತನಿಗೆ ಸಿಗತಕ್ಕ ಸೇವೆಗಳು ಸಕಾಲದಲ್ಲಿ ಸಿಗುವಂತಾಗಬೇಕು.

**7. ನಿರುದ್ಯೋಗ ಸಮಸ್ಯೆ:**

* ಹೆಣ್ಣು ಮಕ್ಕಳಿಗೆ ಹಂಗಾಮಿನ ನಂತರ ಉಪಕಸುಬುಗಳನ್ನು ಒದಗಿಸಿಕೊಡಬೇಕು.
* ಸಣ್ಣ ಮಕ್ಕಳನ್ನು ಶಾಲೆಗೆ ಕಳುಹಿಸಿದ ಕೃಷಿ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿಸದಂತೆ ನೋಡಿಕೊಳ್ಳುವ ವ್ಯವಸ್ಥೆಯನ್ನು ಮಾಡಬೇಕು.
* ಕೃಷಿ ಮಹಿಳೆಯರಿಗೆ ಗಂಡಸರಿಂದ ಆಗುವ ಶೋಷಣೆ ಮತ್ತು ದೌರ್ಜನ್ಯಗಳಿಂದ ಮುಕ್ತರಾಗಲು ಮಹಿಳಾ ಸಂಘಟನೆಗಳನ್ನು ತೆರೆಯಬೇಕು. ಯಾವುದೇ ಸಮಸ್ಯೆಗಳಿಂದ ಪರಿಹಾರ ಕಾಣಬೇಕಾದರೆ ಹೆಣ್ಣು ಮಕ್ಕಳು ಒಗ್ಗಟ್ಟಾಗಿ ಸಂಘಟಿಸಿ, ನಿಸ್ವಾರ್ಥದಿಂದ ಹೋರಾಟ ನಡೆಸಿದರೆ ಯಶಸ್ಸು ಕಟ್ಟಿಟ್ಟ ಬುತ್ತಿ....

**ಭಾಗವಹಿಸಿದವರು:**

1. ವಾ. ಜಿ. ಡಿಸಿಲ್ವಾ
2. ಕು. ಶೈಲಾಜಾ ಕುಟಬೆಟ
3. ಶ್ರೀಮತಿ ಸುನಂದಾ ಆರ್.ಕಳಕಿಣ್ಣವರ
4. ಶ್ರೀಮತಿ ಚೆನ್ನವ್ವಾ ಸಂಜಯ್ಯರಿ ಸಮಕ
5. ಶ್ರೀಮತಿ ಚಂದ್ರಬಾಯಿ ಕಾನಪ್ಪನಮಳಿ
6. ಶ್ರೀಮತಿ ಜಯಶ್ರೀ ಸುಭಾಷ ಚಿಕರಡ್ಡಿ
7. ಶ್ರೀಮತಿ ಸುಶೀಲಾ ನಿಂ. ಪಾಟೀಲ
8. ಶ್ರೀಮತಿ ಪಾತಿಮಾ ಇನಾಸೊಂಲೋ
9. ಶ್ರೀಮತಿ ಕಮಲಾ ಮ. ರಾಯಕರ
10. ಶ್ರೀಮತಿ ಮಾಲಾ ಬೀರುಪಾತಿ
11. ಶ್ರೀಮತಿ ವಿಮಲ ಗಂ. ಕುಗಜಿ
12. ಶ್ರೀಮತಿ ರಾಜವ್ವ ದೊ. ಹಾನಗಲ್
13. ಶ್ರೀಮತಿ ಶಾರದಾ ಯ. ಕೊರಿನಕೇರಿ
14. ಶ್ರೀಮತಿ ಶೋಭಾ ಆರ್.ನಾಯಕ
15. ಶ್ರೀಮತಿ ರೂಪಾ ನಾರಾಯಣ ಪಾಟೀಲ
16. ಶ್ರೀಮತಿ ವಂದನಾ ನಾರಾಯಣ ಪಾಟೀಲ
17. ಶ್ರೀಮತಿ ಗುಲಾಬಿ ಜಿ. ಗೌಡ
18. ಶ್ರೀ ಕೆ.ಆರ್. ದೇನಿರಾಜು
19. ಶ್ರೀಮತಿ ಶಿವಲಿಂಗವ್ವಾ ಎ. ಶಿರೂರ
20. ಶ್ರೀಮತಿ ಯಮುನವ್ವ ಬ. ವಾಟರ
21. ಶ್ರೀಮತಿ ರೇಷ್ಮಾ ಬಾಳು ಪಿಂಗಡಿ
22. ಶ್ರೀಮತಿ ಸುವರ್ಣಾಶಟ್ಟು ಮಳೆಬಾವಿಕರ
23. ಶ್ರೀಮತಿ ಪ್ರಭಾವತಿ ಕಿರಣ ಪವಾರ
24. ಶ್ರೀಮತಿ ರಾಮತ್ ಜಿ. ಶೇಖ ಗವಾರೆ
25. ಶ್ರೀಮತಿ ಜಯಲಕ್ಷ್ಮಿ ಸ. ಲಂಗೋಟಿ
26. ಶ್ರೀಮತಿ ಲಲಿತಾ ಎಸ್. ನೇತ
27. ಶ್ರೀಮತಿ ವಂದನಾ ಎನ್. ಗೌಂಡಾಡಕರ
28. ಶ್ರೀಮತಿ ಉಷಾಕಿರಣ ಇ. ಕಾಕತಕರ
29. ಶ್ರೀಮತಿ ಶಕುಂತಲಾ ವಾಯ್. ಧೊರಂತ
30. ಶ್ರೀಮತಿ ಮಧುಮತಿ ಡಿ. ಪಾಟೀಲ

# ಮಹಿಳಾ ಟಾಸ್ಕ್ ಫೋರ್ಸ್

## ಬೆಂಗಳೂರಿನ ಕಾರ್ಯಾಗಾರದ ಸಂಕ್ಷಿಪ್ತ ವರದಿ

ಕರ್ನಾಟಕ ರಾಜ್ಯ ಮಹಿಳಾ ಟಾಸ್ಕ್ ಫೋರ್ಸ್ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ವತಿಯಿಂದ ರಾಜ್ಯಮಟ್ಟದ ಸ್ವಯಂ ಸೇವಾ ಸಂಸ್ಥೆಗಳ ಒಂದು ದಿನದ ಕಾರ್ಯಾಗಾರವನ್ನು ಬೆಂಗಳೂರಿನ ಗಾಂಧಿಭವನದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಮಹಿಳಾ ಸಶಕ್ತೀಕರಣ ಕುರಿತಾದ ಕರ್ನಾಟಕ ರಾಜ್ಯ ಸ್ವಯಂಸೇವಾ ಸಂಸ್ಥೆಗಳ ಕಾರ್ಯಗಾರದಲ್ಲಿ ರಾಜ್ಯದೆಲ್ಲೆಡೆಯಿಂದ ಬಂದ ಮಹಿಳೆಯರು ಚರ್ಚೆಯಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಕಾರ್ಯಾಗಾರದ ಉದ್ಘಾಟನೆಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸನ್ಮಾನ್ಯ ಸಚಿವೆಯರಾದ ಶ್ರೀಮತಿ ಮೋಟಮ್ಮನವರು ನೆರವೇರಿಸಿ ಮಹಿಳೆ ಹೆಚ್ಚಿನ ರೀತಿಯ ಸೇವೆಯಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳಬೇಕು ತಾನು ಅಬಲಳಲ್ಲ ಸಬಲಳು ಎಂದು ತೋರಿಸಬೇಕು ಎಂದು ಕರೆಯಿತ್ತರು. ಮುಖ್ಯ ಅತಿಥಿಗಳಾಗಿ ಸಚಿವೆ ರಾಣಿ ಸತೀಶ್, ಸಿ.ಸಿ.ವಿ.ಎ ಅಧ್ಯಕ್ಷರಾದ ಕೆ.ಆರ್. ರಾಮಚಂದ್ರನ್ ಮತ್ತು ಅಧ್ಯಕ್ಷತೆಯನ್ನು ಟಾಸ್ಕ್ ಫೋರ್ಸ್‌ನ ಅಧ್ಯಕ್ಷೆಯಾದ ಗುರಮ್ಮ ಸಿದ್ದಾರೆಡ್ಡಿ ವಹಿಸಿದ್ದರು. ಇಡೀ ದಿನದ ಚರ್ಚೆಯಲ್ಲಿ ಎಲ್ಲಾ ಮಹಿಳೆಯರು ಈ ಕೆಳಕಂಡ ವಿಷಯಗಳ ಬಗ್ಗೆ ಚರ್ಚಿಸಿ ಸಲಹೆಗಳನ್ನು ನೀಡಿದರು. ಕಾರ್ಯಕ್ರಮದಲ್ಲಿ ಟಾಸ್ಕ್ ಫೋರ್ಸ್‌ನ ಸಲಹೆಗಾರರಾದ ಪದ್ಮಾ ಸೇಟ್‌ರವರು ಮತ್ತು ಸದಸ್ಯರಾದ ವಾಸಂತಿ ಶಿವಣ್ಣನವರು, ಎಸ್.ಜಿ. ಸುಶೀಲಮ್ಮ ಲಕ್ಷ್ಮೀಬಾಯಿ, ಗುರಪ್ಪ ಗೌರ ಟಾಸ್ಕ್ ಫೋರ್ಸ್‌ನ ಸದಸ್ಯ ಕಾರ್ಯದರ್ಶಿಗಳಾದ ವಿದ್ಯಾವತಿಯವರು ಭಾಗವಹಿಸಿದ್ದರು.

## ಅಂಗವಿಕಲ ಕ್ಷೇತ್ರದಲ್ಲಿ ಮಹಿಳೆಯ ಪಾತ್ರ

ಈ ವಿಷಯದ ಚರ್ಚೆಯ ನಾಯಕತ್ವವನ್ನು ರಾಯಚೂರಿನ ನವಚೇತನ ಅಂಗವಿಕಲರ ಸಂಘಟನೆಯ ಸಂಸ್ಥೆಯ ಸುರೇಶ ಕುಷ್ಟಗಿಯವರು ವಹಿಸಿದ್ದರು.

ಅಂಗವಿಕಲತೆಯ ಸಮಸ್ಯೆ ನಮ್ಮ ಸಮಾಜದಲ್ಲಿ ತೀರಾ ನಿರ್ಲಕ್ಷಕ್ಕೆ ಒಳಗಾದ ಸಮಸ್ಯೆ. ಇದಕ್ಕೆ ಸಾಮಾಜಿಕ ಪಿಡುಗು ಒಂದು ಪ್ರಮುಖ ಕಾರಣವೆಂದರೆ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಸಮಾನ ಅವಕಾಶ, ಸೌಲಭ್ಯ, ಸೌಕರ್ಯಗಳಿಂದ ವಂಚಿತರಾಗಿರುವುದು. ಅದೇ ನಿಟ್ಟಿನಲ್ಲಿ ಕೆಲವು ಸಲಹೆಗಳನ್ನು ಮಂಡಿಸಿದರು.

1. ಶೈಕ್ಷಣಿಕ ಕಾರ್ಯಕ್ರಮದಲ್ಲಿ ಅಂಗವಿಕಲ ಹೆಣ್ಣು ಮಕ್ಕಳ ಶಾಲಾ ನೊಂದಣಿಯನ್ನು ಹೆಚ್ಚಿಸುವ ಹಾಗೂ ಪ್ರತ್ಯೇಕವಾಗಿ ಮಾನಿಟರ್ ಮಾಡಬೇಕು.
2. ಅಂಗವಿಕಲರ ಸಾಧನ ಸಲಕರಣೆ ಮಾಡುವ ಕೇಂದ್ರದಲ್ಲಿ ಮಹಿಳಾ ಫಿಜಿಯೋ ಥೆರಪಿಸ್ಟ್ ಸೌಲಭ್ಯ ಹೆಚ್ಚಿಸಬೇಕು.
3. ಉದ್ಯೋಗವಕಾಶಗಳು ಮಹಿಳೆಯರಿಗೆ ಹೆಚ್ಚಾಗಬೇಕು.

ಚರ್ಚಾ ಸಭೆಯಲ್ಲಿ ಗುರುವಾಯನಕೆರೆಯ ಆರ್. ಮಲ್ಲಿಕ, ಬೆಳ್ತಂಗಡಿಯ ವನಿತಾ ರೈ, ಶಿವಾರಪಟ್ಟಣದ ಭಾಗ್ಯಮ್ಮ ಬೀದರ್‌ನ ರಾಜಕುಮಾರ್, ಘಟಪ್ರಭಾದ ಲಲಿತಾ ಚೌಗಲೆ ಇನ್ನು ಅನೇಕರು ಭಾಗವಹಿಸಿದ್ದಾರೆ.

## ಮಹಿಳಾ ಮತ್ತು ಕಾನೂನು

ಈ ವಿಷಯದ ಚರ್ಚೆಯ ನಾಯಕತ್ವವನ್ನು ಬೆಂಗಳೂರಿನ ಆರ್. ಪಂಕಜರವರು ವಹಿಸಿದ್ದರು, ಮಹಿಳಾ ಮತ್ತು ಕಾನೂನು ಈ ವಿಷಯ ಬಹಳ ದೊಡ್ಡದಾಗಿದ್ದರೂ. ಈ ವಿಚಾರ ಪುಸ್ತಕದಲ್ಲಿಯೇ ಇದೇಯೇ ಹೊರತು ಕಾರ್ಯರೂಪದಲ್ಲಿ ಕೇವಲ ಅರ್ಧದಷ್ಟಿದೆ. ಗ್ರಾಮಮಟ್ಟದಲ್ಲಿ ಕಾನೂನಿನ ಬಗ್ಗೆ ಕಾರ್ಯಾಗಾರ, ವಿಚಾರ ಗೋಷ್ಠಿಗಳನ್ನು ಮಾಡಬೇಕಾಗುತ್ತದೆ. ಪುರಷರಿಗೂ, ಮಹಿಳೆಯರಿಗೂ ಹಾಗೂ ಯುವಜನಾಂಗಕ್ಕೆ ಹೇಗೆ ಹಂತಹಂತವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು ಎಂಬುದರ ಬಗೆಗೆ ಟಾಸ್ಕ್ ಫೋರ್ಸ್‌ಗೆ ಸಲಹೆಗಳನ್ನು ನೀಡಿದರು.

1. ವರದಕ್ಷಿಣೆ ನಿಷೇದ ಕಾನೂನು ಇದ್ದರೂ ಕೂಡಾ, ಯಾವುದೇ ಉಪಯೋಗವಾಗಿಲ್ಲ.ಇದನ್ನು ನಿವಾರಿಸುವ ನಿಟ್ಟಿನಲ್ಲಿ ಯೋಚಿಸಬೇಕು.
2. ಆಸ್ತಿಯಲ್ಲೂ ಮಹಿಳೆಯರಿಗೆ ಸಮಪಾಲು ಎನ್ನುವ ಅರಿವು ಮೂಡಿಸಬೇಕು.
3. ಕಾನೂನಿನ ಅರಿವು ಮತ್ತು ನೆರವು ಎರಡನ್ನು ಪ್ರತಿ ಮಹಿಳೆಗೆ ತಲುಪುವ ಹಾಗೆ ಮಾಡಬೇಕು.
4. ರಾಜಕೀಯದಲ್ಲಿ ಮಹಿಳಾ ಮೀಸಲಾತಿ ಜಾರಿಗೆ ಬರಬೇಕು. (ಶೇ. 33 ರಿಂದ ಶೇ 50)

ಚರ್ಚೆಯಲ್ಲಿ ಬೆಂಗಳೂರಿನ ಶಾಂತಮ್ಮ ಎನ್. ನಾಗಲಕ್ಷ್ಮೀ, ಎಮ್. ಪದ್ಮ ವಿಜಯಮ್ಮ ಪುಷ್ಪ, ಚನ್ನಪಟ್ಟಣದ ಸಿದ್ದೇಗೌಡ, ಬೆಳ್ತಂಗಡಿಯ ಚಂದ್ರಾವತಿ, ರಾಯಚೂರಿನ ರೇಣುಕಾ, ಜ್ಯೋತಿ ಭಾಗವಹಿಸಿದ್ದರು.

## ಮಹಿಳೆ ಮತ್ತು ವರದಕ್ಷಿಣೆ ದೌರ್ಜನ್ಯ

ಈ ವಿಷಯದ ಚರ್ಚೆಯ ನಾಯಕತ್ವವನ್ನು ಲಿಂಗಸೂರಿನ ಶಾರದಾ ಶೆಟ್ಟಿ ವಹಿಸಿದ್ದರು. ಮಹಿಳೆಗೆ ಆರ್ಥಿಕ ಸಮಾನತೆ, ತಂದೆ-ತಾಯಿಯಿಂದ ಹೆಣ್ಣು ಮಕ್ಕಳಿಗೆ ಸಮಾನ ಸಲಹೆ-ಸಹಕಾರ, ಗಂಡನ ದೌರ್ಜನ್ಯಕ್ಕೆ ಒಳಗಾದ ಮಹಿಳೆಗೆ ಆಶ್ರಯ ನೀಡಬೇಕು. ಸಮಾಜದಲ್ಲಿ ನಡೆಯುವ ವಿವಿಧ ರೀತಿಯ ದೌರ್ಜನ್ಯದ ಬಗ್ಗೆ ಚರ್ಚೆ ನಡೆದು. ಅನೇಕ ಸಲಹೆಗಳನ್ನು ನೀಡಿದರು.

1. ಹೆಣ್ಣು ಭ್ರೂಣಹತ್ಯೆ ನಿಲ್ಲಿಸಬೇಕು.
2. ವರದಕ್ಷಿಣೆ ನಿಷೇಧದ ಬಗ್ಗೆ ಕ್ರಮ ಕೈಗೊಳ್ಳಬೇಕು.
3. ಹೆಣ್ಣಿನ ದೌರ್ಜನ್ಯಕ್ಕೆ ಕಾರಣರಾದವರಿಗೆ ನ್ಯಾಯಯುತವಾದ ಶಿಕ್ಷೆ ಆಗಬೇಕು.
4. ಹೆಣ್ಣು ಮಕ್ಕಳಿಗೆ ಶಿಕ್ಷಣದ, ಅವಶ್ಯಕತೆಯ ಬಗ್ಗೆ ಅರಿವು ಮೂಡಿಸಬೇಕು.
5. ಹೆಣ್ಣು-ಗಂಡು ಮಗು ಎಂದು ವ್ಯತ್ಯಾಸವನ್ನು ತೋರದೆ ಸಮಾನತೆಯನ್ನು ತಾಯಂದಿರು ಮಾರ್ಗದರ್ಶನ ಮಾಡಬೇಕು.

ಚರ್ಚೆಯಲ್ಲಿ ರಾಯಚೂರಿನ ಬಸವನಗೌಡ, ಚಿತ್ರದುರ್ಗದ ಸುಧಾ, ಬೀದರ್‌ನ ಶಕುಂತಲಾ, ಬೀದರ್ ನ ಖಡ್ಕೆ ಕೊಪ್ಪಳದ ಶಾರದಾ ಬಸವರೆಡ್ಡಿ, ಶಿವಲೀಲಾ, ಲಿಂಗಸೂರಿನ ಶಶಿಕಲಾ ಹಟ್ಟಿ, ಲೋಕಮ್ಮ ಪಾಟೀಲ್, ಬಾಳಮ್ಮ ಬಸಪ್ಪ ಭಾಗವಹಿಸಿದ್ದರು.

## ಹೆಣ್ಣಿನ ಶೋಷಣೆಯ ಬಗ್ಗೆ ಸ್ವಯಂಸೇವಾ ಸಂಸ್ಥೆಗಳ ಪಾತ್ರ

ಈ ವಿಷಯದ ಚರ್ಚೆಯನ್ನು ಬೆಂಗಳೂರಿನ ಕಮಲಾಬಾಳೆಯವರ ನಾಯಕತ್ವದಲ್ಲಿ ನಡೆಯಿತು. ಸಂಚಾರ ಮಾಡುವ ಸಮಯದಲ್ಲಿ ಮಹಿಳೆಯರಿಗೆ ಮೀಸಲು ಸ್ಥಾನ ಇರಬೇಕು. ಸೊಸೆಗೆ ಅತ್ತೆಯ ಕಿರುಕುಳ, ಗಂಡನಿಂದ ಹೆಂಡತಿಗೆ ಶೋಷಣೆಯ ಬಗ್ಗೆ ಕಠಿಣವಾದ ಕ್ರಮ ಕೈಗೊಳ್ಳಬೇಕು. ಗ್ರಾಮಾಂತರ ಪ್ರದೇಶದಲ್ಲಿ ಹೆಣ್ಣು ಮಕ್ಕಳಿಗೆ

ಅತೀವ ಶೋಷಣೆಯಿದೆ. ಸ್ವಯಂ ಸೇವಾ ಸಂಸ್ಥೆಯಲ್ಲಿ ಕೆಲಸ ಮಾಡುವ ಮಹಿಳೆಯರಿಗೆ ಸರಕಾರಿ ಕಛೇರಿಗಳಲ್ಲಿ ಅತೀವ ಶೋಷಣೆ ಮಾಡುತ್ತಾರೆ. ಹೀಗೆ ಚರ್ಚೆಯು ವಿಭಿನ್ನ ರೀತಿಯಲ್ಲಿ ನಡೆದು ಸಲಹೆಗಳನ್ನು ನೀಡಿದರು.

1. ತಂದೆ-ತಾಯಂದಿರು ಹೆಣ್ಣಿಗೆ ಪ್ರಾಶಸ್ತ್ಯ ಕೊಟ್ಟು ಬೆಳೆಸಬೇಕು.
2. ವಿಧವಾ ವಿವಾಹಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಡಬೇಕು.
3. ಸಮಾಜದ ಎಲ್ಲಾ ರಂಗಗಳಲ್ಲು ಮಹಿಳೆಗೆ ಅವಕಾಶ ಹೆಚ್ಚಿರಬೇಕು.
4. ಮಹಿಳೆಯರ ವರದಕ್ಷಿಣೆ ಸಾವುಗಳ ಬಗ್ಗೆ ಕ್ರಮ ಕೈಗೊಳ್ಳಬೇಕು,

ಚರ್ಚೆಯಲ್ಲಿ ಹುಕ್ಕೇರಿಯ ಅಶೋಕ್ ಪಾಮೇಲ, ಬೆಳಗಾವಿಯ ಪಾದರ್ ಡಿಸಿಲ್ವಾ, ಮಳವಳ್ಳಿಯ ಕೆಂಪಣ್ಣಗೌಡ, ರಾಯಚೂರಿನ ಚೆನ್ನಮ್ಮ ಉತ್ತರ ಕನ್ನಡದ ಸಂಧ್ಯ, ಗುಲಬರ್ಗದ ಸರಸ್ವತಿ ಸೇರಿದಂತೆ ಇನ್ನಿತರರು ಭಾಗವಹಿಸಿದ್ದರು.

## ಮಹಿಳೆ ಮತ್ತು ಆರೋಗ್ಯ

ಈ ಚರ್ಚೆಯ ನಾಯಕತ್ವವನ್ನು ಗುಲ್ಬರ್ಗಾದ ಡಾ: ಸರಸ್ವತಿ ಚಿಮ್ಮಲಗಿ; ಕೊಪ್ಪಳದ ಶಾರದಾ ಬಸವರೆಡ್ಡಿ ವಹಿಸಿದ್ದರು. ಆರೋಗ್ಯವೇ ಭಾಗ್ಯ, ಆರೋಗ್ಯವೆಂದರೆ ಮಾನಸಿಕವಾಗಿ, ದೈಹಿಕವಾಗಿ ಸ್ವಸ್ಥವಾಗಿರುವುದು. ಆರೋಗ್ಯವಂತ ಮನುಷ್ಯ ಏನೆಲ್ಲ ಸಾಧನೆಯನ್ನು ಮಾಡಬಲ್ಲ, ಆದರೆ ದೇಹ ಗಟ್ಟಿಯಾಗಿದ್ದರೂ ಮನಸ್ಸು ದುರ್ಬಲವಾಗಿದ್ದರೆ, ಅದು ದೇಹವನ್ನು ದುರ್ಬಲಗೊಳಿಸುತ್ತದೆ. ಇದಕ್ಕೆ ಉದಾಹರಣೆ ಮಹಿಳೆ ಎನ್ನುವುದರಲ್ಲಿ ಸಂಶಯವೇ ಇಲ್ಲ. ಮನೆ ಮತ್ತು ಸಮಾಜದಲ್ಲಿ ಎರಡನೇ ದರ್ಜೆ ಪಡೆದ ಮಹಿಳೆ ಊಟ-ಉಪಚಾರ, ಶಿಕ್ಷಣ, ಹಕ್ಕು-ಬಾಧ್ಯತೆಗಳ ಸಮತೋಲನ ಸಿಗದೇ ಇರುವುದು. ಆರ್ಥಿಕ ಮುಗ್ಗಟ್ಟಿನಿಂದ ವೇಶ್ಯಾವೃತ್ತಿಗಿಳಿಯುವುದರಿಂದ. ಏಡ್ಸ್ ಮುಂತಾದ ರೋಗಗಳನ್ನು ತಂದುಕೊಳ್ಳುವುದು, **ಮಹಿಳೆಯ ಆರೋಗ್ಯವೆಂದರೆ, ಕುಟುಂಬದ ಆರೋಗ್ಯ, ಕುಟುಂಬದ ಆರೋಗ್ಯವೆಂದರೆ ಸಮಾಜದ ಆರೋಗ್ಯವೆಂದು ಪರಿಗಣಿಸಬೇಕು,** ಹೀಗೆ ಚರ್ಚಾ ಸಭೆಯು ಅನೇಕ ಸಲಹೆಗಳನ್ನು ನೀಡಿತು.

1. ವ್ಯಾಯಾಮ ಶಿಕ್ಷಣ, ಲೈಂಗಿಕ ಶಿಕ್ಷಣ, ಆಧ್ಯಾತ್ಮಿಕ, ಸಾಮಾಜಿಕ ಶಿಕ್ಷಣ ಮುಂತಾದ ಜ್ಞಾನವನ್ನು ಮಹಿಳೆಗೆ ಮುಖ್ಯವಾಗಿ ದೊರಕಿಸುವುದು.
2. ಮಹಿಳೆ ತಾನು ಅಬಲೆ, ಶಕ್ತಿ ಇಲ್ಲದವಳು ಎಂಬ ಭಾಗವನ್ನು ಹೋಗಲಾಡಿಸಲು ಪ್ರಯತ್ನಿಸಬೇಕು.
3. ಅಂತರ ಹೆರಿಗೆಯ ಬಗ್ಗೆ ನಿಗಾವಹಿಸುವಂತೆ ತಿಳುವಳಿಕೆಯನ್ನು ಗ್ರಾಮಾಂತರ ಮಟ್ಟದಲ್ಲಿ ಹಮ್ಮಿಕೊಳ್ಳಬೇಕು.
4. ಅತೀ ಕಡಿಮೆ ವಯಸ್ಸಿನ ಯುವತಿಗೆ ಮದುವೆ ನಿಷೇಧಕ್ಕೆ ಹೆಚ್ಚು ಒತ್ತು ಕೊಡಬೇಕು.

ಚರ್ಚಾ ಸಭೆಯಲ್ಲಿ ಬ್ಯಾಹಟ್ಟಿಯ ಗಿರಿಜಾಬಾಯಿ, ನಿಂಗವ್ವ, ಕಲ್ಲವ್ವ ಪಾರ್ವತಿ, ಪದ್ಮಾ ಗಣೇಶ, ತಿಪಟೂರಿನ ಶಂಕರಮ್ಮ ಭಾಗವಹಿಸಿದ್ದರು.

## ಕೃಷಿಯಲ್ಲಿ ಮಹಿಳೆಯ ಪಾತ್ರ

ಈ ಚರ್ಚೆಯ ನಾಯಕತ್ವವನ್ನು ಬೆಂಗಳೂರಿನ ಪುಷ್ಪ ವಿ.ಕೆ. ವಹಿಸಿದ್ದರು. ಕೃಷಿಯಲ್ಲಿ ಮಹಿಳೆಯ ಪಾತ್ರವೇ ದೊಡ್ಡದು ಕಾರಣ ಗ್ರಾಮೀಣ ಮಹಿಳೆ ತನ್ನ ಮನೆಯ ಎಲ್ಲಾ ಸದಸ್ಯರ ಜವಾಬ್ದಾರಿಗಳನ್ನು ನಿಭಾಯಿಸಿ, ಹೊಲಗದ್ದೆಗಳಲ್ಲಿ ಹೋಗಿ ದುಡಿಯುತ್ತಾಳೆ. ಕಳೆಯಿಂದ ಬೆಳೆಯವರಿಗೂ ಶ್ರಮ ಪಡೆಯುತ್ತಾಳೆ. ಆದರೆ ಇಲ್ಲಿ ಸ್ತ್ರೀ ಮನೆಯ ಒಡತಿಯಾದರು ಜಮೀನಿನ ಒಡೆಯ ಗಂಡನೇ ಆಗಿರುತ್ತಾನೆ. ಅವಳು ಕೃಷಿಯಲ್ಲಿ ಗಂಡಸಿಗೆ ಸಮಾನವಾಗಿ ದುಡಿದರೂ, ಜಮೀನಿನ ಹಕ್ಕು ಪತ್ರಕ್ಕೇ ಅವಳದು ಸಂಬಂಧವಿಲ್ಲದಂತೆ ಮಾಡುತ್ತಾರೆ. ಸಲಹೆಗಳು ಹೀಗಿವೆ-

1. ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರಿಗೆ ಕೃಷಿ ಬಿಟ್ಟರೆ ಬೇರೆ ಕೆಲಸ ಬರುವುದಿಲ್ಲ. ಆದ್ದರಿಂದ ಮಹಿಳೆಯರಿಗೆ ಕೈಗಾರಿಕಾ ರಂಗದಲ್ಲಿ ಅವರಿಗೆ ಪ್ರಾಶಸ್ತ್ಯ ನೀಡಿ ತರಬೇತಿ ನೀಡಬೇಕು.

2. ಪುರುಷರಿಗು ಮತ್ತು ಮಹಿಳೆಯರಿಗೂ ಸಮಾನ ವೇತನ ಕೊಡಬೇಕು.

ಚರ್ಚೆಯಲ್ಲಿ ತಿಪಟೂರಿನ ಶಾರದಮ್ಮ ಸುಶೀಲಮ್ಮ ಶಂಕರಮ್ಮ ಕೆ. ಧಾರವಾಡದಿಂದ ಶಂಕರಮ್ಮ ನಿಂಗೇಗೌಡ, ಎಲ್ಲವ್ವ ಮಾರಣ್ಣ, ರೇಣುಕಾ ಮುಂತಾದವರು ಭಾಗವಹಿಸಿದ್ದರು.

## ಸಾಮಾಜಿಕ ಕ್ಷೇತ್ರದಲ್ಲಿ ಸ್ವಯಂಸೇವಾ ಸಂಸ್ಥೆಗಳ ಪಾತ್ರ

**ಈ ಚರ್ಚೆಯ ನಾಯಕತ್ವವನ್ನು ಬೆಂಗಳೂರಿನ ಲಕ್ಷ್ಮಮ್ಮ ರೆಡ್ಡಿ ವಹಿಸಿದ್ದರು.**

1. ಸ್ವಯಂ ಸೇವಾ ಸಂಸ್ಥೆಗಳು ನಿಯಮಬದ್ಧವಾಗಿ ರಿಜಿಸ್ಟ್ರೇಷನ್ ಮಾಡಿಸಬೇಕು.
2. ಆಡಳಿತ ಮಂಡಳಿಯಲ್ಲಿ ದಕ್ಷರು ಇರಬೇಕು. ಶಿಸ್ತು, ಸಮಯಪ್ರಜ್ಞೆ ಇರಬೇಕು.
3. ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸುವ ಶಕ್ತಿ ಇರಬೇಕು. ಬೇರೆಯವರ ಒತ್ತಡಕ್ಕೆ ಮಣಿಯಬಾರದು.
4. ಸಾಮಾಜಿಕ ಪಿಡುಗುಗಳ ವಿರುದ್ಧ ಹೋರಾಟ, ಜನಗಳ ಅವಶ್ಯಕತೆಯನ್ನು ಅವಲಂಬಿಸಿ ಕಾರ್ಯಕ್ರಮ ರೂಪಿಸಬೇಕು.

ಈ ಕಾರ್ಯಕ್ರಮದಲ್ಲಿ ಬೀದರ್‌ನ ಚನ್ನಮ್ಮ ಬೆಂಗಳೂರಿನ ಕ್ಯಾಥೋಲಿನ್ ಮೇರಿ, ವೀಣಾ, ಉಷಾ, ಮಂಗಳಾ ರಾಜು, ಬಿಜಾಪುರದ ಬಸಮ್ಮ ಬೆಳಗಾಂನ ಜೆ.ಬಿ. ಡಿಸಿಲ್ವ, ಚಿತ್ರದುರ್ಗದ ಮದ್ವರಾಜ್, ಚಿಕ್ಕಬೆನ್ನೂರಿನ ದೀಪಾ, ಈರಮ್ಮ ಮುಂತಾದವರು ಭಾಗವಹಿಸಿದ್ದರು.

## ಶೈಕ್ಷಣಿಕ ಹಾಗೂ ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರ ಪಾತ್ರ

ಈ ವಿಷಯದ ಚರ್ಚೆಯ ನಾಯಕತ್ವವನ್ನು ಬೀದರ್‌ನ ಶಕುಂತಲಾ ಬೆಲ್ದಾಳೆ ವಹಿಸಿದ್ದರು. ಭಾರತವು ಜಗತ್ತಿನಲ್ಲಿಯೇ ಉನ್ನತ ಸಂಸ್ಕೃತಿ ಹಾಗೂ ಪರಂಪರೆಯನ್ನು ಹೊಂದಿರುವ ದೇಶ. ಈ ದೇಶದಲ್ಲಿ ಮಹಿಳೆಯರಿಗೆ ಉನ್ನತಸ್ಥಾನವಿದೆ. ಮಹಿಳೆಯನ್ನು ಆದಿಶಕ್ತಿ ಎಂದೂ ಭಾವಿಸಲಾಗುತ್ತಿದೆ. ಒಬ್ಬ ಮಹಿಳೆ ಶಿಕ್ಷಣವನ್ನು ಪಡೆದರೆ ಒಂದು ಶಾಲೆಯನ್ನು ತೆರೆದಂತೆ, ಆದ್ದರಿಂದ ಶಿಕ್ಷಣ ಕ್ಷೇತ್ರದಲ್ಲಿ ಮಹಿಳೆಯರ ಪಾತ್ರ ಬಹು ಮುಖ್ಯವಾಗಿದೆ. ಇನ್ನು ರಾಜಕೀಯವಾಗಿ ಮಹಿಳೆಯರಿಗೆ ಸಿಗಬೇಕಾದ ಸೌಲಭ್ಯಗಳು ತಕ್ಕ ಪ್ರಮಾಣದಲ್ಲಿ ಸಿಕ್ಕಿಲ್ಲ. ರಾಜಕೀಯವಾಗಿ ಗ್ರಾಮೀಣ ಮಟ್ಟದಲ್ಲಿ ಜಾಗೃತಿ ಇಲ್ಲದೇ ಇರುವುದರಿಂದ, ಗ್ರಾಮೀಣ ಮಹಿಳೆಯರ ತಕ್ಕ ಪ್ರಮಾಣದಲ್ಲಿ ರಾಜಕೀಯ ಪ್ರವೇಶ ಪ್ರವೇಶಿಸಿಲ್ಲ. ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರ ಪಾತ್ರ ದೊಡ್ಡದು, ಏಕೆಂದರೆ ಬಹುಮುಖ ವ್ಯಕ್ತಿತ್ವ ಪಡೆದಿರುವುದರಿಂದ, ಸಮಾಜದ ದೇಶಕ್ಕೆ ಅಭಿವೃದ್ಧಿಗೆ ಒಳ್ಳೆಯ ರಾಜಕೀಯ ಅವಶ್ಯ, ಅದನ್ನು ನೀಡಬಲ್ಲವರು ಮಹಿಳೆಯರು ಮಹಿಳೆಯರಿಗೆ ರಾಜಕೀಯದಲ್ಲಿ ಮೀಸಲಾತಿ ಸೌಲಭ್ಯ. ಆಸ್ತಿ ಹಕ್ಕು, ಸಿಗುತ್ತಿದ್ದರೂ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಸಿಗಬೇಕು. **ತೊಟ್ಟಿಲು ತೂಗುವ ಕೈ ರಾಷ್ಟ್ರದ ಚುಕ್ಕಾಣಿ ಹಿಡಿದೀತು** ಎನ್ನುವುದಕ್ಕೆ ತಕ್ಕ ಉದಾಹರಣೆ 17 ವರ್ಷ ದೇಶ ಆಳಿದಂತಹ ದಿವಂಗತ **ಇಂದಿರಾ ಗಾಂಧಿ.**

**ಸಲಹೆಗಳು:**

1. ಮಹಿಳೆಯರ ಶೈಕ್ಷಣಿಕ ಮಟ್ಟ ಕನಿಷ್ಠ ಪಿ.ಯು.ಸಿನವರಗೆ ಗ್ರಾಮಾಂತರ ಮಟ್ಟದಲ್ಲಿ ಇರಬೇಕು.
2. ರಾಜಕೀಯ ಜಾಗೃತಿಯ ಕೊರತೆಯ ಬಗ್ಗೆ ಶಿಕ್ಷಣ ನೀಡಬೇಕು.
3. ಸಹಕಾರ ಕ್ಷೇತ್ರದಲ್ಲಿ ಮೀಸಲಾತಿ ಸಿಗುವ ಹಾಗೆ ಮಾಡಬೇಕು.

ಚರ್ಚೆಯಲ್ಲಿ ಬೆಳಗಾವಿಯ ಬೀದರ್‌ನ ಶಕುಂತಲಾ ಬೆಲ್ದಾಳ, ಕೊಪ್ಪಳದ ನಾಗವೇಣಿ, ಬೀದರ್‌ನ ಹೇಮಾಪಾಟೀಲ್, ಕೊಪ್ಪಳದ ದೇವಿಲಕ್ಷ್ಮೀ, ಗುಲಬರ್ಗಾದ ಗುಂಡೇರಾವ್, ಬಸವರಾಜ್ ಮೊಗಲಮನಿ ಭಾಗವಹಿಸಿದ್ದರು.

# ಮಧ್ಯಪಾನ, ಮಾದಕ ವಸ್ತುಗಳ ನಿಷೇದದಲ್ಲಿ ಸ್ವಯಂಸೇವಾ ಸಂಸ್ಥೆಗಳ ಪಾತ್ರ

ಈ ಚರ್ಚೆಯ ನಾಯಕತ್ವನ್ನು ಬೆಂಗಳೂರಿನ ದಯಾನಂದ ಸ್ವಾಮಿ ವಹಿಸಿದ್ದರು. ಮಧ್ಯ ಮಾದಕ ಪದಾರ್ಥಗಳಿಂದ ಆರ್ಥಿಕ ಹಾಗೂ ಆರೋಗ್ಯದ ಮೇಲೆ ಅಪಾರ ದುಷ್ಪರಿಣಾಮಗಳಾಗಿ, ಕೌಟುಂಬಿಕ ಜೀವನದ ನೆಮ್ಮದಿ ಸಂಪೂರ್ಣ ನಾಶವಾಗತೊಡಗಿದ್ದು, ಇದರಿಂದಾಗಿ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ, ಕಲ್ಯಾಣ ಎಂದಿಗೂ ಸಾಧ್ಯವಾಗುತ್ತಿಲ್ಲ , ಮಧ್ಯಪಾನದಿಂದಾಗುವ ಹಾನಿಯೇನು ಎಂಬ ಬಗ್ಗೆ ತೌಲನಿಕ ಅಧ್ಯಯನವನ್ನು ಸರ್ಕಾರ ಕೈಗೊಂಡರೆ ಮಧ್ಯಪಾನ ನಿಷೇದದಿಂದ ಯಾವ ತೊಂದರೆಯೂ ಇಲ್ಲದಂತೆ ಸರ್ಕಾರ ತನ್ನ ಆಡಳಿತ ಯಂತ್ರ ನಡೆಸಲು ಸಾಧ್ಯವೆಂಬ ಸಂಗಾತಿ ಗೋಚರವಾಗುವುದರಿಂದ ಸರ್ಕಾರ ಈ ದಿಸೆಯಲ್ಲಿ ಪ್ರಯತ್ನ ಮಾಡಬೇಕೆಂದು ಈ ಕಾರ್ಯಾಗಾರ ಆಗ್ರಹಿಸುತ್ತದೆ.

1. ಆರೋಗ್ಯ ಕಾರ್ಯಕ್ರಮದಡಿಯಲ್ಲಿ ಮಧ್ಯಮಾದಕ ವ್ಯಸನಿಗಳನ್ನು ಚಿಕಿತ್ಸೆಗೊಳಪಡಿಸುವುದರ ಮೂಲಕ ಅವನನ್ನು ಆರೋಗ್ಯವಂತ ಮಾನವನನ್ನು ಮಾಡವುದರ ಬಗ್ಗೆ ಸರ್ಕಾರ ತನ್ನ ಎಲ್ಲಾ ಆರೋಗ್ಯ ಕೇಂದ್ರಗಳಲ್ಲಿ ವ್ಯವಸ್ಥೆ ಮಾಡಬೇಕು. .
2. ಮಧ್ಯಪಾನ ನಿಷೇಧವನ್ನು ಒಂದು ವೇಳೆ ಜಾರಿಗೆ ತಂದರೆ, ಇದರಿಂದ ಉದ್ಭವಿಸಬಹುದಾದ ಸಮಸ್ಯೆಗಳ ಬಗ್ಗೆ ಪೂರ್ಣ ಸಮೀಕ್ಷೆಯನ್ನು ವಿವಿಧ ಕ್ಷೇತ್ರಗಳ ತಜ್ಞರೊಡನೆ ಚರ್ಚೆ ನಡೆಸಿ ಇದಕ್ಕೆ ಪರಿಹಾರವನ್ನೂ ಕಂಡು ಹಿಡಿಯಲು ಪ್ರಯತ್ನಿಸಬೇಕು.

ಚರ್ಚೆಯಲ್ಲಿ ಬೆಂಗಳೂರಿನ ಸುಬ್ರಮಣ್ಯ, ಸರಿತಾ, ಹೆಚ್. ರಾಮಕೃಷ್ಣ, ಬಿ.ಹೆಚ್. ಯಶೋದ, ನಂಜುಂಡಪ್ಪ, ರೇಣುಕಾ, ಲಕ್ಷಮ್ಮ ಮುನಿರತ್ನ, ಮಹಾಲಕ್ಷ್ಮೀ, ಮಂಗಳ, ಗಿರಿಜಾ ಶಿವಪುರ, ಕೃಷ್ಣ, ಸುಬ್ರಮಣ್ಯ ಪಾವಗಡ, ಮಂಗಳಾ ಸುಬ್ರಮಣ್ಯ, ಸುಶೀಲ, ಸವಿತಾ ಭಾಗವಹಿಸಿದ್ದರು.

# ಪಾಶ್ಚ್ಯಾತೀಕರಣದ ವಿರುದ್ಧ ಸ್ವಯಂಸೇವಾ ಸಂಸ್ಥೆಗಳ ಪಾತ್ರ

ಈ ಚರ್ಚೆಯ ನಾಯಕತ್ವವನ್ನು ಬೆಂಗಳೂರಿನ ಬಿಜ್ಜವಾರ ಸುಬ್ರಮಣ್ಯರವರು ವಹಿಸಿದ್ದರು. ವಿದೇಶದಿಂದ ಬರುತ್ತಿರುವ ಇಂಗ್ಲೀಷ್ ಮಾತ್ರೆಗಳಿಂದ ಬೇಗ ಕಾಯಿಲೆ ವಾಸಿಯಾದರು. ಅದರಿಂದ ನಮಗೆ ಇನ್ನೊಂದು ಕಾಯಿಲೆ ಹುಟ್ಟಿಕೊಳ್ಳುತ್ತದೆ. ಇವುಗಳಿಂದ ಲಾಭಕ್ಕಿಂತ ನಷ್ಟವೇ ಹೆಚ್ಚಿದೆ. ಅದೇ ಭಾರತದ್ದೇ ಆದ ಆಯುರ್ವೇದ ಔಷಧಿಗಳಿಂದ ನಿಧಾನವಾಗಿ ಕಾಯಿಲೆ ಸಂಪೂರ್ಣ ವಾಸಿಯಾಗುತ್ತದೆ. ಇದರಿಂದ ಯಾವುದೇ ತೊಂದರೆಯಿರುವುದಿಲ್ಲ. ಆಯುರ್ವೇದದ ಬಗ್ಗೆ ಸ್ವಯಂ ಸೇವಾ ಸಂಸ್ಥೆಗಳು ತಿಳುವಳಿಕೆ ಮೂಡಿಸಿದ್ದೆ ಆದರೆ, ಹೊರದೇಶದಲ್ಲು ಆಯುರ್ವೇದವು ಪ್ರಚಲಿತವಾಗುತ್ತದೆ.

1. ಪ್ಲಾಸ್ಟಿಕ್ ವಸ್ತುಗಳ ಬಳಕೆಯ ನಿಷೇಧ ಜಾರಿಗೆ ತರಬೇಕು.
2. ಸ್ವದೇಶಿ ವಸ್ತುಗಳ ಉತ್ಪನ್ನ ಮತ್ತು ಬಳಕೆ ಹೆಚ್ಚಿಸಬೇಕು.
3. ವಿದೇಶಿ ಕಾರ್ಖಾನೆಗಳ ಆರಂಭ ನಿಲ್ಲಿಸಬೇಕು.

ಚರ್ಚೆಯಲ್ಲಿ ಭಾಗವಹಿಸಿದವರು ಗದಗ್ ನಿಂದ ಎಸ್.ವೈ. ಕೇಶವ್, ಹೆಚ್. ಹೊಂದಲಯ್ಯ , ದೇವಿಲಕ್ಷ್ಮೀ ಬೆಳ್ಳೂರ, ಚಿತ್ರದುರ್ಗದಿಂದ ಸಿ. ಬಿಳಿಯಪ್ಪ, ಶರಣಮ್ಮ ಈರಮ್ಮ ಸುವರ್ಣಮ್ಮ ಭಾಗವಹಿಸಿದ್ದರು.

## ಉದ್ಯಮಶೀಲತೆ, ಮಾರಾಟ ಮತ್ತು ಮಹಿಳೆ

ಈ ಚರ್ಚೆಯ ನಾಯಕತ್ವವನ್ನು ಗುಲಬರ್ಗಾದ ಆರ್.ಎಸ್. ವಿಜಯಲಕ್ಷ್ಮೀಯವರು ವಹಿಸಿದ್ದರು, ಉದ್ಯಮಶೀಲತಾ ಜಾಗೃತಿ ಶಿಬಿರಗಳು ಮತ್ತು ತರಬೇತಿಗಳು ಪಟ್ಟಣಗಳಷ್ಟೇ ಅಲ್ಲದೆ ಹಳ್ಳಿಗಳಲ್ಲಿಯೂ ಆಗಬೇಕು, ಯಾವ ಯಾವ ಸ್ಥಳಗಳಲ್ಲಿ, ಯಾವ ಚಟುವಟಿಕೆಗಳಿಗೆ ಅವಕಾಶ ಮತ್ತು ಉತ್ತೇಜನ ಇದೆಯೊ ಅದೇ ಸ್ಥಳಗಳಲ್ಲಿ ಆಯಾ ವಸ್ತುಗಳ ತಯಾರಿಕೆಗೆ ತರಬೇತಿ ಕೊಡಬೇಕು ಮತ್ತು ಅಲ್ಲಿಯೇ ಸಿದ್ಧಪಡಿಸುವ ವ್ಯವಸ್ಥೆ ಮಾಡಬೇಕು, ವಿಶೇಷವಾಗಿ ಅಂತಹ ವಸ್ತುಗಳಿಗೆ ಆರ್ಥಿಕ ಸಹಾಯ ಮತ್ತು ಇತರೇ ಸೌಲಭ್ಯಗಳನ್ನು ಒದಗಿಸಬೇಕು, ಜಿಲ್ಲಾ ಮಟ್ಟದಲ್ಲಿ ತಾಲೂಕುಮಟ್ಟದಲ್ಲಿ, ರಾಜ್ಯಮಟ್ಟದಲ್ಲಿ ವಸ್ತು ಪ್ರದರ್ಶನ ಮತ್ತು ಮಾರುಕಟ್ಟೆ ಮಳಿಗೆಗಳನ್ನು ಏರ್ಪಡಿಸಬೇಕು ಸಲಹೆಗಳು ಹೀಗಿವೆ

1. ಆರ್ಥಿಕ ಸಹಾಯ ಮತ್ತು ಸಾಲ ಸೌಲಭ್ಯಗಳ ಕುರಿತಾದ ಮಾಹಿತಿ ಶಿಬಿರಗಳನ್ನು ಏರ್ಪಡಿಸಬೇಕು.
2. ಕೌಶಲ್ಯ ತರಬೇತಿ ಮತ್ತು ಗುಣಮಟ್ಟ ಕಾಯ್ದುಕೊಳ್ಳುವ ಬಗ್ಗೆ ಶಿಬಿರವನ್ನು ಏರ್ಪಡಿಸಬೇಕು.
3. ವಸ್ತು ಪ್ರದರ್ಶನ ಮಾರುಕಟ್ಟೆ ಮಳಿಗೆಗಳ ಮಾಹಿತಿಯನ್ನು ಒಕ್ಕೂಟಗಳಿಗೆ ನಿಯಮಿತವಾಗಿ ನೀಡುತ್ತಾ ಇರಬೇಕು.
4. ಸಂಚಾರಿ ಮಾರುಕಟ್ಟೆಗೆ ಬೇಕಾದ ವಾಹನಗಳ ವ್ಯವಸ್ಥೆ ಮಾಡಬೇಕು.
5. ಒಂದೇ ರೀತಿಯ ಸಂಪರ್ಕಕ್ಕೆ ವ್ಯವಸ್ಥೆ ಮಾಡುವುದು.

ಚರ್ಚೆಯಲ್ಲಿ ಗದಗನಿಂದ ಶ್ರೀಕಾಂತ ಎಸ್.ಜಿ. ಮಂಡ್ಯದಿಂದ ಜಗನ್ನಾಥ ಬಳಿಯ ಉತ್ತರ ಕನ್ನಡದಿಂದ ರಾಮದಾಸ್, ಗುಲಬರ್ಗಾದಿಂದ ವಿಜಯಲಕ್ಷ್ಮಿ ಚಿತ್ರದುರ್ಗದಿಂದ ಈರಪ್ಪ, ಖಂರೀಷ್, ದೀಪಿಕಾ, ಸುಧಾರಾಣಿ ಶಹಾಬಾದ್‌ನಿಂದ ಬಸವರಾಜ ಮೊಗಲಮನಿ, ಧಾರವಾಡದಿಂದ ರೇಣುಕಾ ಮಹಾದೇವಿ ಭಾಗವಹಿಸಿದ್ದರು.

## ಬಾಲಕಾರ್ಮಿಕರ ಸಮಸ್ಯೆಗಳ ಬಗ್ಗೆ ಚರ್ಚೆ

ಈ ಚರ್ಚೆಯ ನಾಯಕತ್ವವನ್ನು ಬೆಂಗಳೂರಿನ ರಾಮಕೃಷ್ಣ ಶಾಸ್ತ್ರಿಯವರು ವಹಿಸಿದ್ದರು. ಕಾನೂನು ರೀತ್ಯಾ 14 ವರ್ಷದವರೆಗೂ ಬಾಲಕರಾಗಿ ಪರಿಗಣಿಸಿದ್ದಾರೆ. ಮತ್ತು 18 ವರ್ಷದ ನಂತರ ವಯಸ್ಕನಾಗಿ ಪರಿಗಣಿಸಿದ್ದಾರೆ ಆದರೆ ಯಾವುದಕ್ಕೂ ಸೇರದ ತ್ರಿಶಂಕುಗಳಾಗಿದ್ದು ಇವರನ್ನು ಬಾಲಕರ ಪಟ್ಟಿಗೆ ಸೇರಿಸಬೇಕೆಂದು ಕಾನೂನು ಪಾಲಕರಲ್ಲಿ ನಮ್ಮ ಪ್ರಾರ್ಥನೆ ಈಗಿರುವ ಕಾನೂನಿನಲ್ಲಿ ಕೆಲವು ಸುಧಾರಣೆಗಳನ್ನು ತಂದು ಅದನ್ನು ಜಾರಿಗೆಪಡಿಸಲು ಪ್ರಭಾವಶಾಲಿ ಮಾಧ್ಯಮಗಳನ್ನು ಬಳಸಿಕೊಳ್ಳುವುದರಿಂದಲೂ ಮತ್ತು ಸೇವಾಕರ್ತರು ತಮ್ಮ ಕಾರ್ಯವೈಖರಿಯಲ್ಲಿ ಸ್ವಲ್ಪ ಬದಲಾವಣೆಯನ್ನು ತಂದಲ್ಲಿ ಬಾಲಕಾರ್ಮಿಕ ಪದ್ಧತಿಯನ್ನು ಹೋಗಲಾಡಿಸಬಹುದು,

1. ನಿರಾಶ್ರಿತ ಮತ್ತು ಅರ್ಧ ಆಶ್ರಿತ ಮಕ್ಕಳ ದೊಡ್ಡ ಸಮಸ್ಯೆ, ವಸತಿ ಮತ್ತು ಭೋಜನ ನಂತರ ಶಿಕ್ಷಣ ಅವರಿಗೆ ಸಂಪೂರ್ಣ ಉಚಿತವಾಗಿ ಎಲ್ಲಾ ಸೌಲಭ್ಯಗಳನ್ನ ನೀಡಬೇಕು.
2. ಪಾರಂಪಾರಿಕ ಮತ್ತು ವೃತ್ತಿ ತರಬೇತಿಗಳನ್ನು ಕೊಡಿಸಿ ಅವರ ಭವಿಷ್ಯಕ್ಕೆ ಭದ್ರಬುನಾದಿಗಳನ್ನು ಕಲ್ಪಿಸಬೇಕು.

ಚರ್ಚೆಯಲ್ಲಿ ರತ್ನ ಅಗಳಿ, ರಾಜಣ್ಣ ಬಿ.ಕೆ. ಸುಮಾ ಎಸ್. ಈಶ್ವರಿ ಎಂ. ಬಂಗಾರಮ್ಮ ತಂದೂರ, ಮಲ್ಲಮ್ಮ ಶಶಿಕಲಾ ಗಂಗಾಧರ ಕೆ. ಗುಲ್ಜಾರ ಟಿ. ರವಿಕುಮಾರ ಭಾಗವಹಿಸಿದ್ದರು.

